# ಗಣೇಶ





ಮೂಲ:— ಡಾ॥ ಸಂಪೂರ್ಣಾನಂದ್.

ಅನುವಾದ:— ಪಿ. ಮರಿಬಸವಾರಾಧ್ಯ.

ಡಾ|| ಸಂಪೂರ್ಣಾನಂದ್ B.Sc., L.T.

ಪೂಜ್ಯ ಶ್ರೀ ಮಹೇಶ ದೇವರಿಗೆ

# ಗಣೇಶ

ವಂದನೆಗಳೊಡನೆ

ಪಿ. ಮರಿಬಸವಾರಾಧ್ಯ 14/5/89

ಅನುವಾದಕರು

ವಿದ್ವಾನ್ ಪಿ. ಮರಿಬಸವಾರಾಧ್ಯ

ರಿಸರ್ಚ್ ಅಸಿಸ್ಟೆಂಟ್

ಪ್ರಾಚ್ಯವಿದ್ಯಾ ಸಂಶೋಧನಾಲಯ

ಮೈಸೂರು

ಪ್ರಕಾಶಕರು

ಯೋಗೀಶ ಪ್ರಕಾಶನ

2583, ಚಾಮುಂಡಿಪುರಂ

ಮೈಸೂರು-4

ಪ್ರಕಾಶಕರು

**ಯೋಗೀಶ ಪ್ರಕಾಶನ**

2583, ಚಾಮುಂಡಿಪುರಂ

ಮೈಸೂರು—4



ಮೊದಲ ಮುದ್ರಣ ೧೯೬೩





ಬೆಲೆ: ರೂ. 2=00

ಕ್ಯಾಲಿಕೋ ಪ್ರತಿ ರೂ. 3=00

ಮುದ್ರಕರು : ಡಿ. ರಾಜರತ್ನಂ

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

ಮೈಸೂರು

# ಅರ್ಪಣೆ

ಪೂಜ್ಯ
ಮಾತಾಪಿತೃಗಳ
ಅಡಿದಾವರೆಗಳಿಗೆ

This Kannada Edition of the

**GANESHA**

of Dr. Sampurnanand B.Sc., L.T.

is published by kind permission of the

Author.

# ಭೂಮಿಕೆ

ನಾನು ಹುಡುಗನಾಗಿದ್ದಾಗ ನಡೆದ ಒಂದು ವಿಷಯ. ನಮ್ಮ ಮನೆಯಲ್ಲಿ ಮಾಡುವ ವಿಶೇಷ ಪೂಜೆಗಳಲ್ಲಿ ಗಣೇಶನನ್ನು ಪ್ರಾರ್ಥಿಸುವಾಗ ಈ ಶ್ಲೋಕವನ್ನು ಹೇಳುತ್ತಿದ್ದರು:—

ಗಜಾನನಂ ಭೂತಗಣಾದಿ ಸೇವಿತಂ
ಕಪಿತ್ಥಜಂಬೂಫಲಚಾರುಭಕ್ಷಣಮ್ ।
ಉಮಾಸುತಂ ಶೋಕವಿನಾಶಕಾರಕಂ ।
ನಮಾಮಿ ವಿಘ್ನೇಶ್ವರಪಾದಪಂಕಜಮ್ ॥

ಶ್ಲೋಕದ ಅರ್ಥ ಸರಳವಾಗಿದೆ. ಅರ್ಥಮಾಡಬೇಕಾದ ಪ್ರಮೇಯವಿಲ್ಲ. ಸಂಸ್ಕೃತ ತಿಳಿಯದ ಹಿಂದುಗಳ ಮನೆಯ ಹುಡುಗರೂ ಸಹ ಇದರ ಅರ್ಥವನ್ನು ತಿಳಿದುಕೊಳ್ಳಬಲ್ಲರು. ಈ ಶ್ಲೋಕದಲ್ಲಿಯ ವಿಘ್ನೇಶ್ವರ ಶಬ್ದವು ನನ್ನ ಮನಸ್ಸಿನಲ್ಲಿ ಒಂದು ಸಮಸ್ಯೆಯಾಗಿತ್ತು. ನನ್ನಿಂದ ಸುಮ್ಮನಿರಲಾಗಲಿಲ್ಲ. ನಮ್ಮ ಮನೆಯ ಪುರೋಹಿತರನ್ನು ಕೇಳಿಯೇ ಬಿಟ್ಟೆ. ಅದಕ್ಕೆ ಅವರು 'ಇವನೇ ವಿಘ್ನಗಳಿಗೆ ಸ್ವಾಮಿ ಅವುಗಳನ್ನು ನಾಶಮಾಡುವವನು ಎಂದು ಹೇಳಿದರು. ಅವರ ವ್ಯಾಖ್ಯಾನ ನನಗೆ ಹಿಡಿಸಲಿಲ್ಲ. ಮತ್ತೆ ಅವರನ್ನೇ ಕೇಳಿದೆ. ವಿಘ್ನೇಶ್ವರನಿಗೆ ನೀವು ಹೇಳಿದ ಅರ್ಥವನ್ನೇ ಹೇಳುವುದಾದರೆ, ಜಗದೀಶ್ವರ ಅಂದರೆ ಜಗತ್ತನ್ನು ನಾಶಮಾಡುವವನೆಂದು ಜಗದೀಶ್ವರನಿಗೆ ಹೇಳಬೇಕಾಗುತ್ತದೆ. ಆದರೆ ಇದಕ್ಕೆ ಉತ್ತರ ಅವರಲ್ಲಿರಲಿಲ್ಲ. ಆ ವಿಷಯ ಅಲ್ಲಿಗೇ ನಿಂತುಹೋಯಿತು. ಇದರಲ್ಲಿ ಪುರೋಹಿತರದೇನೂ ತಪ್ಪಿಲ್ಲ. ಗಣೇಶನು ವಿಘ್ನೇಶ್ವರನು ಹೇಗಾದ? ವಿಘ್ನೇಶ್ವರನಾಗಿದ್ದರೂ ಶೋಕವಿನಾಶಕನು ಹೇಗಾದನೆಂಬುದು ಆ ಪುರೋಹಿತರಿಗೆ ಕರ್ಮಕಾಂಡವನ್ನು ಕಲಿಸಿದ ಗುರುಗಳಿಗೂ ತಿಳಿದಿರಲಾರದು. ಇದರ ಕಡೆ ಮನಸ್ಸೂ ಸಹ ಹರಿದಿರಲಾರದು. ಗೃಹಸ್ಥ

ಯಜಮಾನನು ಇದರ ವಿಷಯವಾಗಿ ಅನುಮಾನಿಸುತ್ತಿರಲೂ ಇಲ್ಲ. ಈ ಕಾರಣಗಳಿಂದ ಈ ವಿಷಯದಲ್ಲಿ ಸಂಶೋಧನೆ ನಡೆಯಲಿಲ್ಲ.

ದೊಡ್ಡವನಾದ ಮೇಲೆ ಗಣೇಶನ ಪರವಾದ ಮಂತ್ರದ ಮೇಲೆ ದೃಷ್ಟಿಬಿದ್ದಿತು :—

**ಗಣಾನಾಂತ್ವಾ ಗಣಪತಿಂ ಹವಾಮಹೆ ಪ್ರಿಯಾಣಾಂತ್ವಾ ಪ್ರಿಯಪತಿಂ ಹವಾಮಹೆ ನಿಧೀನಾಂತ್ವಾ ನಿಧಿಪತಿಂ ಹವಾಮಹೆ ವಸೋ ಮಮ । ಆಹಮಜಾನಿ ಗರ್ಭಧಮಾತ್ವಮಜಾಸಿ ಗರ್ಭಧಮ್ ।**

ಇದರಲ್ಲಿಯ ಗಣಪತಿ ಶಬ್ದವು ಈ ಮಂತ್ರವು ಗಣಪತಿ ಮಂತ್ರವೆಂದು ಹೇಳುತ್ತದೆ. ಆದರೆ ಮುಂದೆ ಗರ್ಭ ಶಬ್ದವು ಎರಡುಸಾರಿ ಬಂದಿರುವುದರಿಂದ ಮೇಲಿನ ಅರ್ಥಕ್ಕೆ ಸಮರ್ಥನೆ ಇರುವುದಿಲ್ಲ. ಇದರ ವಿಷಯವಾಗಿ ಪಂಡಿತರು ಏನೂ ಹೇಳಲಾರರು. ಪಂಡಿತ ಸಮಾಜದ ವಿಚಾರಧಾರೆಯು ಸಮಾಧಾನವನ್ನುಂಟುಮಾಡುವುದಿಲ್ಲ. ಅಷ್ಟೇಕೆ ಕಾಶಿಯ ಯಾವ ವಿದ್ವಾಂಸರೇ ಆಗಲಿ ಈ ಅನುಮಾನವನ್ನು ನಿವಾರಣೆ ಮಾಡಬೇಕಾದರೆ ತಿಣುಕಾಡಬೇಕಾಗುತ್ತದೆ. ಇದರ ಮೂಲವನ್ನು ತಿಳಿಯಲು ದಿವಂಗತ ಜ್ವಾಲಾಪ್ರಸಾದ ಮಿಶ್ರರ ಸಟೀಕ ರುದ್ರವನ್ನು ಕೊಂಡುಕೊಂಡೆ ಅದರಲ್ಲಿ ಸಂಸ್ಕೃತ ಟೀಕೆಯು ಪ್ರಾಚೀನ ಪರಂಪರೆಯನ್ನು ಅನುಸರಿಸಿದೆ. ಆದರೆ ಹಿಂದೀ ಟೀಕೆಯು ವ್ಯಾಕರಣ ನಿಯಮಗಳನ್ನು ಅತಿಕ್ರಮಿಸಿ ಹೊಸ ರೂಪವನ್ನು ಧರಿಸಿದೆ. 'ಆಹಮಜಾನಿ ಗರ್ಭಧಮಾತ್ವಮಜಾಸಿಗರ್ಭಧಮ್' ಎಂಬುದರ ಅರ್ಥವನ್ನು ಈ ರೀತಿ ಮಾಡಲಾಗಿದೆ; ನಾನು ನಿನ್ನ ಮೂಲಕ ಗರ್ಭದಿಂದ ಹುಟ್ಟಿಸಿದ್ದೇನೆ. ತಾವು ಗರ್ಭದಿಂದ ಹುಟ್ಟಲಿಲ್ಲ. ಅಲ್ಲಿಂದ ಮುಂದೆ ಹಿಂದೀ ತಿಳಿಯುವವರೂ ಸಹ ಅದರ ಮೂಲ ಅರ್ಥ ಮತ್ತು ಆ ಮಂತ್ರವು ಬಂದಿರುವ ಪ್ರಕರಣವನ್ನೂ ಸಹ ತಿಳಿಯಬಾರದೆಂದು ವ್ಯಾಖ್ಯಾನ ಮಾಡಿದ್ದಾರೆ.

ಏನೇನೋ ಆಧ್ಯಾತ್ಮಿಕ ಶಬ್ದಗಳಿಂದ ನಿಜವಾದ ಅರ್ಥವನ್ನು ಬಚ್ಚಿಟ್ಟಿದ್ದಾರೆ. ಆದರೂ ಅವರು ಮಾಡಿರುವ ಅರ್ಥದಲ್ಲಿಯೂ ಸಹ ಗಣೇಶನಿಗೆ ಸಂಬಂಧಿಸಿದ ಯಾವ ಶಬ್ದವೂ ಅಲ್ಲಿಲ್ಲ. ಜ್ವಾಲಾಪ್ರಸಾದ ಮಿಶ್ರರು ಆ ಮಂತ್ರವು ಬ್ರಹ್ಮಣಸ್ಪತಿ ಪರವಾದುದೆಂದು ಹೇಳಿದ್ದಾರೆ. ಇದಾದ ಕೆಲವು ವರ್ಷಗಳ ನಂತರ ನಾನು ಸಂಸ್ಕೃತವನ್ನು ಆಳವಾಗಿ ವ್ಯಾಸಂಗ ಮಾಡುವಾಗ ಶುಕ್ಲಯಜುರ್ವೇದವನ್ನು ಉವ್ವಟ ಮತ್ತು ಮಹೀಧರರ ವ್ಯಾಖ್ಯಾನಗಳೊಂದಿಗೆ ಅಭ್ಯಾಸಮಾಡುವ ಅವಕಾಶ ಸಿಕ್ಕಿತು. ಅವರಿಬ್ಬರು ಮಾಡಿರುವ ವ್ಯಾಖ್ಯಾನವು ಆ ಪ್ರಕರಣವನ್ನೇ ಅನುಸರಿಸಿದೆ. ಅವರ ಅರ್ಥವನ್ನೇ ಶ್ರೌತಸೂತ್ರ ಮತ್ತು ಬ್ರಾಹ್ಮಣಗಳು ಸಹ ಅನುಸರಿಸಿವೆ. ಈ ಮಂತ್ರದಲ್ಲಿ ಅಶ್ವಮೇಧದ ಅಶ್ವವನ್ನು ಸ್ಪಷ್ಟವಾಗಿ ಗಣಪತಿ ಎಂದು ಹೇಳಿರುವುದರಿಂದ ಅನುಮಾನಕ್ಕೆ ಅವಕಾಶವೇ ಇಲ್ಲ. ಯಜುರ್ವೇದವನ್ನು ಅಭ್ಯಾಸ ಮಾಡಿದ ಅನಂತರ ಉಳಿದ ಮೂರು ಸಂಹಿತೆಗಳನ್ನೂ ಸಹ ಭಾಷ್ಯ ಸಹಿತವಾಗಿ ಓದಿದೆ. ನಾನು ಓದಿದ ಮೂಲ ಮತ್ತು ಭಾಷ್ಯಗಳನ್ನು ಕರತಲಾಮಲಕವಾಗಿ ತಿಳಿದಿದ್ದೇನೆಂದು ಭಾವಿಸಬಾರದು. ಆದರೂ ನನಗೆ ತಿಳಿದಷ್ಟುಮಟ್ಟಿಗೆ ಯಾವ ಸಂಹಿತಾ ಭಾಗದಲ್ಲಿಯೇ ಆಗಲಿ ಗಣೇಶನ ಉಲ್ಲೇಖವು ಬಂದಿಲ್ಲವೆಂದು ನಿಶ್ಚಯಪೂರ್ವಕವಾಗಿ ಹೇಳಬಲ್ಲೆ. ಇದರಿಂದ ನನ್ನ ಬಾಲ್ಯದ ಅನುಮಾನ ನಿವಾರಣೆಯಾಗದೆ ಉಳಿಯಿತು. ಇದರ ಜೊತೆಗೆ ಮತ್ತೊಂದು ವಿಚಾರಧಾರೆ ಹೊರಟಿತು. ಗಣೇಶನು ಯಾರು ? ಇವನ ಪೂಜೆ ಯಾವಾಗ ಪ್ರಾರಂಭವಾಯಿತು ? ಶಿವಪುರಾಣದಲ್ಲಿ ಇವನ ಜನ್ಮದ ಕಥೆಯನ್ನೇನೋ ಓದಿ ತಿಳಿದುಕೊಂಡಿದ್ದೆ. ಇವನನ್ನು ತುಲಸೀರಾಮಾಯಣದಲ್ಲಿ ಸುರನೆಂದು ಪೂಜಿಸಲಾಗಿದೆ. ಹಿಂದೂ ಧರ್ಮದ ಮೂಲ ಪ್ರಾಮಾಣಿಕ ಗ್ರಂಥವಾದ ವೇದದಲ್ಲಿ ಗಣಪತಿಯ ಉಲ್ಲೇಖವಿಲ್ಲ. ವಿನಾಯಕನನ್ನು ಭೂತಪ್ರೇತಗಳ ಜೊತೆಯಲ್ಲಿ ಸೇರಿಸಿ ಅವನ ಶಾಂತಿಗಾಗಿ ಪೂಜಾದಿಗಳು ನಡೆಯುತ್ತಲಿದ್ದವು. ಹಿಂದುಗಳ

ಮನೆಮನೆಗಳಲ್ಲಿ ಗಣೇಶನ ಪೂಜೆಯಾಗುತ್ತದೆ. ಇದೊಂದು ಭೇದಿಸ ಲಾಗದ ರಹಸ್ಯವಾಗಿದೆ. ಆಮೂಲಾಗ್ರವಾಗಿ ಗಣೇಶನ ಪೂರ್ವೇತಿಹಾಸ ಗಳನ್ನು ತಿಳಿಯಲು ಹೊರಟೆ.

ಈ ಸಂಶೋಧನೆ ಕೆಲವು ವರ್ಷಗಳವರೆವಿಗೆ ನಡೆಯಿತು. ರಾಜ ಕೀಯ ವ್ಯಕ್ತಿಗಳಿಗೆ ಸಮಯ ಸಿಕ್ಕುವುದೆಲ್ಲಿ? ಸರ್ಕಾರದ ಕೃಪಾದೃಷ್ಟಿ ಯಿಂದ ಆಗಾಗ ಜೈಲಿಗೆ ಹೋಗುತ್ತಿದ್ದೆ. ಕೆಲಸ ಅಷ್ಟಕ್ಕೆ ನಿಲ್ಲುತ್ತಿತ್ತು. ಸುಮಾರು ಏಳು ವರ್ಷಗಳು ಕಳೆದಿರಬಹುದು, ಆಗ ಶ್ರೀಮತಿ ಎಲಿಸ್ ಗೇಟೆ ಬರೆದಿರುವ 'ಗಣೇಶ' ಎಂಬ ಗ್ರಂಥ ಸಿಕ್ಕಿತು. ಅನೇಕ ವಿದ್ವಾಂಸರ ಸಂಶೋಧನೆಯ ಫಲಗಳು ಒಂದೆಡೆ ಆ ಗ್ರಂಥದಲ್ಲಿ ಫಲಿತ ವಾಗಿವೆ. ಅದರಲ್ಲಿಯ ಕೆಲವು ವಿಷಯಗಳು ನನ್ನನ್ನು ಆಕರ್ಷಿಸಿದವು. ನಾನು ಪಡಬೇಕಾಗಿದ್ದ ಅರ್ಧ ಪರಿಶ್ರಮವನ್ನು ಆ ಗ್ರಂಥ ಕಡಿಮೆ ಮಾಡಿತು. ಲೋಕಪ್ರಿಯ ಭಾರತೀಯ ಉಪಾಸ್ಯನಾದ ಗಣಪತಿಯ ವಿಷಯವಾಗಿ ವಿದೇಶೀ ವಿದುಷಿಯು ವಿಷಯವನ್ನು ಸಂಕಲಿಸುವುದಕ್ಕಿಂತ ಮುಂಚೆ ಭಾರತೀಯರಾರೂ ಅವನ ವಿಷಯವನ್ನು ಒಂದುಕಡೆ ಸಂಕಲಿ ಸಲು ಪ್ರಯತ್ನ ಪಡಲಿಲ್ಲ. ಇದು ಸಂಸ್ಕೃತಿಯ ಪತನದ ಚಿಹ್ನೆಯೆಂದು ಹೇಳಬಹುದು.

ಪ್ರಕೃತ 'ಗ್ರಂಥದಲ್ಲಿ ಪ್ರತಿಪಾದಿಸಿರುವ ವಿಷಯಗಳು ಅಂತಿಮ ಸಿದ್ಧಾಂತಗಳೆಂದು ಹೇಳಲಾಗುವುದಿಲ್ಲ. ಆದರೂ ಈ ನನ್ನ ಅಭಿಪ್ರಾಯ ದಂತೆ ಪ್ರತಿಪಾದಿತ ವಿಷಯಗಳು ಬದಲಾವಣೆಗಳಾಗುವ ಸಂಭವವಿರುವು ದಿಲ್ಲ. ಭಾರತದ ಒಳಗೂ ಹಾಗು ಹೊರಗೂ ಹೊಸ ಹೊಸ ಮೂರ್ತಿಗಳು ಸಿಕ್ಕಬಹುದು, ಹೊಸ ಹೊಸ ಪುಸ್ತಕಗಳು ದೊರಕಬಹುದು. ಇಲ್ಲಿನ ವರೆವಿಗೆ ಸಿಕ್ಕಿರುವ ಮೂರ್ತಿಗಳು ಗುಪ್ತರ ಕಾಲಕ್ಕಿಂತ ಹಿಂದಿನವುಗಳು ಅಥವಾ ಮುಂದಿನವುಗಳಾಗಿವೆ. ಅಂದರೆ ಮಹಾಯಾನ ಬೌದ್ಧಸಂಪ್ರ ದಾಯದ ಅನಂತರದವುಗಳು. ಒಂದು ಪಕ್ಷ ಹೊಸದಾದ ಸಾಮಗ್ರಿಗಳು

ಸಿಕ್ಕಿದರೆ ನೂರು ಅಥವಾ ಇನ್ನೂರು ವರ್ಷಗಳು ಹಿಂದಕ್ಕೆ ಹೋಗ ಬಹುದು. ಆದರೆ ಗಣೇಶನನ್ನು ವೈದಿಕ ಕಾಲದವರೆವಿಗೆ ತೆಗೆದುಕೊಂಡು ಹೋಗುವ ಸಾಮಗ್ರಿಗಳಾವುವೂ ಸಿಕ್ಕಲಾರವು. ನಾನು ನೋಡಿರುವ ಹಾಗೆ ಗಣೇಶನ ಸಂಪೂರ್ಣ ಸ್ವರೂಪವನ್ನು ಎಂಟನೇ ಅಧ್ಯಾಯದಲ್ಲಿ ವಿವರಿಸಿದ್ದೇನೆ. ಆರ್ಯರು ವೈದಿಕ ಕಾಲದಲ್ಲಿ ಸಪ್ತಸಿಂಧುವಿನ ಪ್ರದೇಶ ದಲ್ಲಿ ವಾಸಿಸುತ್ತಿದ್ದಾಗ ಗಣೇಶನನ್ನು ಪೂಜಿಸುತ್ತಿರಲಿಲ್ಲ. ಆರ್ಯ ರಿಗೆ ಗಣೇಶನ ಅಸ್ತಿತ್ವದಲ್ಲಿ ವಿಶ್ವಾಸವಿರಲಿಲ್ಲ. ಅಲ್ಲಿಂದ ಪೂರ್ವಕ್ಕೆ ಬಂದ ಮೇಲೆ ಅನಾರ್ಯರೊಡನೆ ಸಂಪರ್ಕ ಬೆಳೆಯಿತು. ಆರ್ಯರು ಅನಾ ರ್ಯರ ಪ್ರದೇಶಗಳಲ್ಲಿ ನೆಲಸಿದರು. ಆರ್ಯರು ವಿಜಯಿಗಳಾಗಿ ತಮ್ಮ ಸಂಸ್ಕೃತಿಯನ್ನು ಪ್ರಚಾರಮಾಡಿದರು. ಅನಾರ್ಯರ ಸಂಸ್ಕೃತಿಯೂ ಸಹ ಅವರ ಮೇಲೆ ಪ್ರಭಾವ ಬೀರದೆ ಇರಲಿಲ್ಲ. ವಿದ್ವಾಂಸರು ಆರೀತಿ ಯಾದ ಸಾಂಕಾರ್ಯವನ್ನು ವಿರೋಧಿಸಿದರು. ಆದರೆ ಸಾಮಾನ್ಯ ಜನರು ಅನಾರ್ಯರ ಸಂಸ್ಕೃತಿ ಹಾಗು ಅವರ ಕೆಲವು ದೇವತೆಗಳನ್ನು ತಮ್ಮವು ಗಳನ್ನಾಗಿ ಮಾಡಿಕೊಂಡರು. ಆ ದೇವತೆಗಳು ಅಸಭ್ಯಕಾಡುಜನರಿಂದ ಎಲ್ಲಾ ಕಡೆಗಳಲ್ಲಿಯೂ ಪೂಜೆಗೊಳ್ಳುತ್ತಿದ್ದವು. ಅವುಗಳು ಪಶುಪಕ್ಷಿ ಗಳಂತೆ ಅಥವಾ ಪಿಶಾಚಿಗಳ ಮುಖದಂತೆ ಇರುತ್ತಿದ್ದವು. ಕೆಲವು ಹಳ್ಳಿ ಗಳಲ್ಲಿ ಈರೀತಿಯ ಮಣ್ಣಿನ ಅಥವಾ ಮರದ ಪ್ರತಿಮೆಗಳನ್ನು ಇಂದು ನಾವು ನೋಡಬಹುದು. ಈ ಎಲ್ಲಾ ದೇವತೆಗಳು ಕ್ರೂರದೇವತೆಗಳೇ. ಅವುಗಳನ್ನು ಪೂಜಿಸಿ ಶಾಂತಗೊಳಿಸಬೇಕು. ನೆರೆಹೊರೆಯರಾದ ಅನಾರ್ಯ ರಿಂದ ಆರ್ಯರು ನಾಗ, ಕತ್ತೆಯಮೇಲೆ ಕುಳಿತಿರುವ ಶೀತಲಾ (ಸಿಡುಬಿನ ಮಾರಿ) ಮತ್ತು ನಾಯಿಯ ಮೇಲೆ ಕುಳಿತಿರುವ ಭೈರವನ ಜೊತೆಯಲ್ಲಿ ಇಲಿಯಮೇಲೆ ಕುಳಿತಿರುವ ಗಜಮುಖನಾದ ವಿನಾಯಕನನ್ನೂ ಸಹ ಸ್ವೀಕರಿಸಿ ಪೂಜಿಸತೊಡಗಿದರು. ಅಂದು ವಿನಾಯಕನು ಗ್ರಾಮದೇವತೆ ಯಾಗಿದ್ದ. ಗ್ರಾಮ ಗ್ರಾಮಗಳಲ್ಲಿ ಅಥವಾ ಪ್ರಾಂತಗಳಲ್ಲಿ ಅವನ ಪ್ರತಿಮೆ

ಗಳಿರುತ್ತಿದ್ದವು. ಅವು ಒಂದಕ್ಕಿಂತ ಒಂದು ಭಿನ್ನವಾಗಿರುತ್ತಿದ್ದವು. ಅವು ಗಳ ಕಥೆಗಳು ಬೇರೆ ಬೇರೆಯಾಗಿದ್ದವು. ಪುರಾಣಗಳು ಈ ವಿಷಯವನ್ನು ಸ್ಪಷ್ಟೀಕರಿಸುತ್ತವೆ. ವೈದಿಕ ಸಂಪ್ರದಾಯಕ್ಕೆ ಗಣೇಶನು ಪ್ರವೇಶಿಸಿದ ಅನಂತರ ವಿದ್ವಾಂಸರು ಮಹತ್ತ್ವಮಸಾಮಾನ್ಯ ಅಪವರ್ತನವನ್ನು ಮಾಡುವಂತೆ ಒಂದು ಸೊಂಡಿಲು, ಒಂದು ದಂತ (ಕೋರೆ) ಮತ್ತು ರಕ್ತವರ್ಣದವನೆಂದು ತೀರ್ಮಾನಿಸಿದರು. ಆದರೆ ಪೂರ್ವದ ಸ್ಮೃತಿಯು ನಾಶವಾಗಲಿಲ್ಲ. ಮುಂದೆ ಇದೇ ಪುಸ್ತಕದಲ್ಲಿ ಕೊಟ್ಟಿರುವ ಕಥೆಗಳಲ್ಲಿ ಒಂದುಕಡೆ ಐದು ಸೊಂಡಿಲು ಸಹಿತ ಹುಟ್ಟಿರುವ ಕಥೆ ಇದೆ. ಮತ್ತೊಂದು ಕಡೆ ಗಣೇಶನಿಗೂ ಮತ್ತು ಸ್ಕಂದನಿಗೂ ಏಕಸಾಮ್ಯದ ಕಥೆ ಒಂದಿದೆ. ಇನ್ನು ಕೆಲವೆಡೆ ವರಾಹ (ಹಂದಿ) ಮುಖದ ಉಲ್ಲೇಖ ವಿದೆ. ಅವನ ಬಣ್ಣವು ಕೆಲವು ಕಡೆ ಬಿಳುಪು ಮತ್ತು ಕಪ್ಪೆಂದು ವರ್ಣಿಸ ಲಾಗಿದೆ. ಗಣೇಶ ಪುರಾಣದಲ್ಲಿ:—

ಧ್ಯಾಯೇತ್ಸಿಂಹಗತಂ ವಿನಾಯಕಮಮುಂ
ದಿಗ್ಬಾಹುಮಾದ್ಯೇ ಯುಗೆ,
ತ್ರೇತಾಯಾಂ ತು ಮಯೂರವಾಹನಮಮುಂ
ಷಡ್ಬಾಹುಕಂ ಸಿದ್ಧಿದಮ್ ।
ದ್ವಾಪರೇ ತು ಗಜಾನನಂ ಯುಗಭುಜಂ
ರಕ್ತಾಂಗರಾಗಂ ವಿಭುಮ್
ತುರ್ಯೇ ತು ದ್ವಿಭುಜಂ ಸಿತಾಂಗರುಚಿರಂ
ಸರ್ವಾರ್ಥದಂ ಸರ್ವದಾ ॥

ಕೃತಯುಗದಲ್ಲಿ ವಿನಾಯಕನಿಗೆ ಸಿಂಹ ವಾಹನವಾಗಿದ್ದಿತು. ಅವನಿಗೆ ಹತ್ತು ಕೈಗಳಿದ್ದವು. ತ್ರೇತಾಯುಗದಲ್ಲಿ ನವಿಲು ವಾಹನ ಮತ್ತು ಆರು ಕೈಗಳಿದ್ದವು. ದ್ವಾಪರಯುಗದಲ್ಲಿ ಗಜಾನನನಿಗೆ ನಾಲ್ಕು ಕೈಗಳಿದ್ದವು. ಕಲಿಯುಗದಲ್ಲಿ ಅವನು ಶ್ವೇತವರ್ಣ ಮತ್ತು ಎರಡು ಕೈಗಳುಳ್ಳವನಾಗಿದ್ದಾನೆ. ಇಲ್ಲಿ ದ್ವಾಪರಕ್ಕಿಂತ ಹಿಂದಿನ ಯುಗಗಳಲ್ಲಿ

ವಿನಾಯಕ ಎಂಬ ಶಬ್ದಪ್ರಯೋಗವಿದೆ. ದ್ವಾಪರದಲ್ಲಿ ಗಜಾನನನೆಂದು ಹೇಳಿದೆ. ಕಲಿಯುಗದಲ್ಲಿ ಸರ್ವಾರ್ಥಗಳನ್ನು ಅನುಗ್ರಹಿಸುವವನಾಗಿದ್ದಾನೆ.

ವಿನಾಯಕನು ಕೇವಲ ವಿಘ್ನವನ್ನುಂಟುಮಾಡುವವನಾಗಿದ್ದವನು ಸತ್ಕಾರ್ಯಗಳಲ್ಲಿಯೂ ಸಹ ವಿಘ್ನಕಾರಿಯಾಗಿದ್ದನು. ಆದುದರಿಂದಲೇ ಪ್ರತಿಯೊಂದು ಕಾರ್ಯಗಳಲ್ಲಿ ಮೊದಲು ಅವನನ್ನು ಪೂಜಿಸಬೇಕಾಗುತಿತ್ತು. ಅವನಿಗೆ ಸ್ವಲ್ಪ ಕಾಣಿಕೆಯನ್ನು ಅರ್ಪಿಸಿ ವಿಸರ್ಜಿಸುತ್ತಿದ್ದರು. ಆರ್ಯರ ಕಲ್ಪನೆಯಲ್ಲಿ ಅವರ ಉಪಾಸ್ಯ ದೇವತೆಗಳು ದುಷ್ಟರಾಗಿರಲಿಲ್ಲ. ವಿನಾಯಕನನ್ನು ಸ್ವೀಕರಿಸಿದ ಮೇಲೆ ಅವನನ್ನು ಕಾಯಕಲ್ಪಗೊಳಿಸಿದರು. ವಿಘ್ನರಾಜನಾಗಿದ್ದವನು ಮಂಗಳ ಪ್ರದಾತನಾದನು. ಮುಂದೆ ಬರುವ ವಿಘ್ನಗಳನ್ನು ನಿವಾರಿಸುವುದರ ಜೊತೆಗೆ ಸಿದ್ಧಿಯನ್ನುಂಟು ಮಾಡುವವನಾದನು. ಇವನನ್ನು ಎಲ್ಲಾ ಕಾರ್ಯಗಳ ಆದಿಯಲ್ಲಿ ಪೂಜಿಸುತ್ತಿದ್ದರು. ಕಾಲಕ್ರಮದಲ್ಲಿ ಈ ಪೂಜೆಯ ಮೂಲ ಉದ್ದೇಶವೇ ಮರೆತು ಹೋಯಿತು. ಮಂಗಳ ಕಾರ್ಯಗಳಲ್ಲಿ ಇವನಿಗೆ ಒಂದು ಪ್ರಧಾನ ಸ್ಥಾನವನ್ನು ಕೊಟ್ಟರು. ಈ ಪರಿವರ್ತನೆಗಳು ಆಗಬೇಕಾದರೆ ಅನೇಕ ವರ್ಷಗಳು ಕಳೆದಿರಬೇಕು. ಆದರೂ ಗಣೇಶನ ಧೈರ್ಯ ಅಸಾಧ್ಯವಾದುದ್ದೇ. ವಿನಾಯಕನು ಧೈರ್ಯದಿಂದ ಮುಂದುವರಿದನು. ಅವನು ದೇವತೆ ಎಂದಾದಮೇಲೆ ಅವನನ್ನು ಪೂಜಿಸುವ ವಿಧಿವಿಧಾನಗಳು ರಚಿತವಾದವು. ವೇದ ಪ್ರತಿಪಾದಿತ ೩೩ ದೇವತೆಗಳ ಜೊತೆಯಲ್ಲಿ ಸ್ಥಾನವನ್ನು ಕೊಟ್ಟು, ಅಲ್ಲಿ ಇಲ್ಲಿ ಹುಡುಕಿ ಒಂದೆರಡು ವೇದಮಂತ್ರಗಳನ್ನು ವಿನಾಯಕನಿಗೆ ಕೊಡಲಾಯಿತು. ಅವನ ಹೆಸರಿನಲ್ಲಿ ಒಂದು ಉಪನಿಷತ್ತೂ ಸಹ ರಚಿತವಾಯಿತು. ಗಣಪತಿಯ ಉಪಾಸಕರ ತನ್ನದೇ ಆದ ಒಂದು ಸಂಪ್ರದಾಯವು ಹುಟ್ಟಿಕೊಂಡಿತು. ಅವರು ಗಣಪತಿಯನ್ನು ಪರಬ್ರಹ್ಮನಿಂದ ಅಭಿನ್ನನೆಂದು ನಂಬಿ ಪ್ರತಿಪಾದಿಸಿದರು.

ಗಣಪತಿಯ ಪ್ರತಿಭೆ ಅಷ್ಟಕ್ಕೇ ನಿಲ್ಲಲಿಲ್ಲ. ಅವನು ಬೌದ್ಧ ಧರ್ಮವನ್ನು ಪ್ರವೇಶಿಸಿದನು. ಅನಂತರ ಅವನ ದಿಗ್ವಿಜಯವು ಪ್ರಾರಂಭವಾಯಿತು. ಒಂದು ಕಡೆ ವೈದಿಕ ಮತಾವಲಂಬಿಗಳಾದ ಹಿಂದುಗಳು ಅವನನ್ನು ಜಾವ, ಬೋರ್ನಿಯಾ ಮತ್ತು ಬಾಲೀ ದ್ವೀಪಗಳಿಗೆ ಕರೆದುಕೊಂಡು ಹೋದರು. ಮತ್ತೊಂದು ಕಡೆ ಅವನು ಬೌದ್ಧ ಭಿಕ್ಷುಗಳ ಜೊತೆಯಲ್ಲಿ ತುರ್ಕಿಸ್ಥಾನ, ಟಿಬೆಟ್, ಚೀನಾ ಮತ್ತು ಜಪಾನನ್ನು ತಲಪಿದನು. ಚೀನಾ ಮತ್ತು ಜಪಾನಿನಲ್ಲಿ ಅವನ ಅಭೂತಪೂರ್ವ ವಿಕಾಸವಾಯಿತು. ಸಾಧನೆ ಮತ್ತು ನಿರ್ವಾಣದ ಗೋಪ್ಯ ವಿಷಯಗಳು ಇವನಿಗೆ ಅಧೀನವಾದವು. ಜಗತ್ತಿನ ಯಾವ ಧರ್ಮದ ದೇವತೆಗಳನ್ನೂ ಸಹ ಗಣೇಶನಿಗೆ ಹೋಲಿಸ ಲಾಗುವುದಿಲ್ಲ. ಇಂದು ಬುದ್ಧ ಏಸು ಮತ್ತು ಮುಹಮ್ಮದನ ಅನು ಯಾಯಿಗಳು ಕೋಟ್ಯಾಂತರ ಜನರಿದ್ದಾರೆ. ಆದರೆ ಅವರಲ್ಲಿ ಯಾವ ಬದಲಾವಣೆಗಳಾಗಲೀ ಅಥವಾ ವಿಭಿನ್ನವೃದ್ಧಿಯಾಗಲೀ ಆಗಿಲ್ಲ. ಒಬ್ಬ ವಿಘ್ನಕರ್ತ ಹಾಗು ಗ್ರಾಮದ ಅಪದೇವತೆಯಾಗಿದ್ದವನು, ಸರ್ವದೇವಾ ಗ್ರಗಣ್ಯನಾಗುವುದು, ಪರಮಾತ್ಮ ಮತ್ತು ಬ್ರಹ್ಮನ ತಾದಾತ್ಮ್ಯವನ್ನು ಹೊಂದುವುದು, ಹೊರಗಿನ ದೇಶಗಳಲ್ಲಿ ವೈರೋಚನ ಮತ್ತು ಅವಲೋಕಿ ತೇಶ್ವರ ಬೋಧಿಸತ್ವನೊಡನೆ ಏಕರೂಪವನ್ನು ಹೊಂದುವುದು ಮತ್ತು ಯೋಗದ ಅನಿರ್ವಚನೀಯ ರಹಸ್ಯದ ಪ್ರತೀಕನಾಗುವುದು ಇವುಗಳೆಲ್ಲವೂ ಗಣೇಶನೊಬ್ಬನ ಕೆಲಸವಾಗಿದೆ. ಅವನ ಅಪ್ರತಿಮ ವ್ಯಕ್ತಿತ್ವಕ್ಕೆ ಎಲ್ಲಾ ದೇವತೆಗಳೂ ತಲೆಬಾಗಲೇ ಬೇಕು.

ಈ ಆಶ್ಚರ್ಯ ಕಥೆಗಳ ಮುಖ್ಯ ಅಂಶಗಳನ್ನು ಈ ಪುಸ್ತಕದಲ್ಲಿ ಕೊಟ್ಟಿದ್ದೇನೆ. ವಿಷಯವನ್ನು ವಿಶದಗೊಳಿಸಬಹುದಾಗಿತ್ತು, ಚಿತ್ರ ಗಳನ್ನೂ ಸಹ ಹೆಚ್ಚಿಗೆ ಕೊಡಬಹುದಿತ್ತು. ಆದರೆ ಕೆಲವು ಅನಿವಾರ್ಯ ಕಾರಣಗಳಿಂದ ವಿಶದಗೊಳಿಸಲಾಗಲಿಲ್ಲ. ಪುರಾಣ ಮತ್ತು ತಂತ್ರಗಳಲ್ಲಿ ಗಣೇಶನಿಗೆ ಸಂಬಂಧಿಸಿದ ಸಾಹಿತ್ಯ ಬಹಳ ವಿಶಾಲವಾಗಿದೆ. ಭಾರತದಲ್ಲಿ

ಹಾಗೂ ಹೊರಗಡೆ ಸುಂದರವಾದ ಮತ್ತು ವಿಲಕ್ಷಣಗಳಾದ ಮೂರ್ತಿಗಳು ಸಿಕ್ಕುತ್ತಲಿವೆ. ಆ ಮೂರ್ತಿಗಳು ಅಶೋಕನ ಅನಂತರದ ಮೂರ್ತಿಗಳಾಗಿವೆ. ಏತಕ್ಕೆಂದರೆ ಬುದ್ಧನಿಗಿಂತ ಮೊದಲು ದೇವದೇವಿಯರ ಮೂರ್ತಿಗಳನ್ನು ಮಾಡಿ ಪೂಜಿಸುವ ಪದ್ಧತಿಯು ರೂಢಿಯಲ್ಲಿ ಇದ್ದಿತೆಂಬುವುದಕ್ಕೆ ಆಧಾರವಿಲ್ಲ. ಆದರೂ ಗಣೇಶನ ವಿಕಾಸದಲ್ಲಿ ಆ ಮೂರ್ತಿಗಳು ಸಹಾಯಕಗಳಾಗುತ್ತವೆ. ನಾನು ಈಗ್ಗೆ ಕೆಲವು ದಿವಸಗಳ ಹಿಂದೆ 'ಬ್ರಾಹ್ಮಣ ಸಾವಧಾನ್' ಎಂಬ ಶೀರ್ಷಕದಲ್ಲಿ ಗಣೇಶನ ಪೂಜೆಯು ವೇದೋಕ್ತವಲ್ಲವೆಂದು ಒಂದು ವಾರಪತ್ರಿಕೆಯಲ್ಲಿ ಲೇಖನವನ್ನು ಬರೆದೆ. ಇದರಿಂದ ಬ್ರಾಹ್ಮಣರ ಒಂದು ಗುಂಪು ರೊಚ್ಚಿಗೆದ್ದಿತು. ನನ್ನ ಅಭಿಪ್ರಾಯದಲ್ಲಿ ಅವರಿಗೆ ಗಣೇಶನ ಪೂಜೆಗೆ ಆಧಾರವೇನೆಂಬುದು ತಿಳಿದಿರಲಾರದು. ಆಮೂಲಾಗ್ರವಾಗಿ ಅವರು ಪುರಾಣಗಳನ್ನು ಓದುವುದಿಲ್ಲ. ವೇದದ ಅರ್ಥದ ಕಡೆಗೆ ಗಮನವಿಡುವುದಿಲ್ಲ. ಅವರೆಲ್ಲರೂ ಸಂಪ್ರದಾಯಶರಣರೇ ಹೊರತು ವಿಚಾರ ನಿಪುಣರಲ್ಲ.

ಹಿಂದೂ ಜನತೆಯ ಮುಂದೆ ಈ ಪುಸ್ತಕವನ್ನು ಇಡಬೇಕೆಂಬ ಉದ್ದೇಶದಿಂದ ಜಾಗ್ರತೆ ಪ್ರಕಟಿಸಲಾಗಿದೆ. ನನ್ನಲ್ಲಿ ಹುಟ್ಟಿದ ಜಿಜ್ಞಾಸೆಯು ಎಲ್ಲರ ಮನಸ್ಸಿನಲ್ಲಿಯೂ ಹುಟ್ಟಲಾರದು. ಒಂದುಪಕ್ಷ ಕೆಲವರಿಗೆ ಜಿಜ್ಞಾಸೆಯು ಹುಟ್ಟಬಹುದು. ಕೋಟ್ಯಾಂತರ ಹಿಂದುಗಳು ಮನೆ ಮನೆಗಳಲ್ಲಿ ಗಣೇಶನನ್ನು ಪೂಜಿಸುತ್ತಾರೆ. ಆದುದರಿಂದ ಈ ಸಂಬಂಧದಲ್ಲಿ ಸಾಂಪ್ರದಾಯಿಕ ಧರ್ಮಕ್ಕೆ ಧಕ್ಕೆ ಬಂದಾಗ ಉದ್ವೇಗ ಬರುವುದು ಸ್ವಾಭಾವಿಕ. ಆದರೆ ನನ್ನ ಉದ್ದೇಶ ಧಾರ್ಮಿಕವಾದುದಲ್ಲ. ನನಗೆ ಗಣೇಶನ ಪೂಜೆಯ ವಿಚಾರದಲ್ಲಿ ವಿಶೇಷ ಆಸಕ್ತಿ ಇಲ್ಲದಿಲ್ಲ. ಸಂಪ್ರದಾಯ ವಿಷಯಗಳ ಖಂಡನ ಮಂಡನದಲ್ಲಿ ನನಗೆ ಅಭಿರುಚಿ ಇಲ್ಲ. ಅವರ ಧಾರ್ಮಿಕ ಭಾವನೆಯು ಭಾರತೀಯ ಧಾರ್ಮಿಕ ಜೀವನದಲ್ಲಿ ಮಹತ್ವದ್ದಾಗಿದೆ. ಮಾನವ ಜಾತಿಯ ಧಾರ್ಮಿಕ ಭಾವನೆಯು ಚರಿತ್ರೆಯಲ್ಲಿ

ಅಪೂರ್ವ ವಸ್ತುವಾಗಿದೆ. ಈರೀತಿಯಾದ ಅಸಾಧಾರಣ ವ್ಯಕ್ತಿತ್ವವನ್ನು ಪಡೆದುಕೊಂಡಿರುವ ಗಣೇಶನ ಕಡೆಗೆ ಧರ್ಮ, ಇತಿಹಾಸ, ಸಮಾಜ ಸಾಸ್ತ್ರ ಮತ್ತು ಮನೋವಿಜ್ಞಾನದ ವಿದ್ಯಾರ್ಥಿಗಳ ಮನಸ್ಸನ್ನು ಆಕರ್ಷಿಸುವುದೇ ನನ್ನ ಈ ಪುಸ್ತಕದ ಮುಖ್ಯ ಗುರಿಯಾಗಿದೆ.

ಭಾರತೀಯ ಸಂಸ್ಕೃತಿಯನ್ನು ದ್ವೇಷಿಸುವ ಮತ್ತು ಅದರ ಮೂಲವನ್ನು ತಿಳಿಯದ ಅದೂರದರ್ಶಿ ವಿಮರ್ಶಕರು ಗಣೇಶನನ್ನು ದ್ವೇಷಿಸುತ್ತಾರೆ. ಅವರಿಗೆ ಬೆವರ್ಲಿ ನಿಕಲ್ಸನ್ನನ ವರ್ಡಿಕ್ಟ್ ಆನ್ ಇಂಡಿಯಾ (Bevarly Nickolson's Verdicts on India) ಎಂಬ ಪುಸ್ತಕವು ಆಧಾರವಾಗಿದೆ. ನಿಕಲ್ಸನ್ನನ ಅಭಿಪ್ರಾಯಕ್ಕೆ ಯಾವ ಬೆಲೆಯಾಗಲೀ, ಅಥವಾ ಸಮ್ಮತಿಯಾಗಲೀ ಇರುವುದಿಲ್ಲ. ಜಗತ್ತಿನ ಎಲ್ಲಾ ವಿದ್ವಾಂಸರೂ ಅವನನ್ನು ತೆಗಳಿದ್ದಾರೆ. ಹಿಂದೂಧರ್ಮವನ್ನು ತೆಗಳಿ ಕ್ರೈಸ್ತಧರ್ಮವನ್ನು ಹೊಗಳಿ ಪ್ರಚಾರ ಮಾಡುವುದಕ್ಕೆಂದೇ ಬರೆದ ಪುಸ್ತಕವದು ಎಂದು ಎಲ್ಲಾ ವಿಚಾರವಂತರೂ ಆಪಾದಿಸಿದ್ದಾರೆ. ಅದೇ ಗ್ರಂಥದಲ್ಲಿ ಏಸುಕ್ರಿಸ್ತ ಮತ್ತು ಗಣೇಶನನ್ನು ತುಲನೆ ಮಾಡಿ ಏಸು ಮೂರ್ತಿಯು ಶಾಂತ, ಕರುಣಾಳು ಮತ್ತು ಸೌಮ್ಯ ಸ್ವಭಾವದ್ದೆಂದೂ, ಗಣೇಶನ ಮೂರ್ತಿಯು ವಿಚಿತ್ರ ಹಾಗು ಭಯಂಕರವನ್ನುಂಟುಮಾಡುವಂಥಹುದೆಂದೂ ಕುದೃಷ್ಟಿಯಿಂದ ವಿವೇಚಿಸಿ ಕುಚೋದ್ಯ ಮಾಡಿದ್ದಾನೆ. ನಿಕಲ್ಸನ್ನನ ವಾದಕ್ಕೆ ಹುರುಳಿಲ್ಲ. ಆದರೂ ವಿದೇಶಿಯರ ದೃಷ್ಟಿಯಲ್ಲಿ ನಮ್ಮ ರೂಪ ಎಂತಹುದೆಂದು ನಾವು ಆಲೋಚಿಸಬೇಕು. ಬೇರೆಯವರು ನಮ್ಮ ವಸ್ತುವನ್ನು ಕೆಟ್ಟದ್ದೆಂದ ಮಾತ್ರಕ್ಕೆ ಅದು ಕೆಟ್ಟದ್ದಾಗುವುದಿಲ್ಲ. ಆದರೆ ನಾವು ನಮ್ಮ ವಸ್ತುಗಳ ಪರಿಪೂರ್ಣ ಜ್ಞಾನವನ್ನು ಪಡೆದುಕೊಳ್ಳಬೇಕು. ನಮ್ಮ ಕುರೂಪೀ ವಸ್ತುಗಳಲ್ಲಿ ಯಾವುದೋ ಒಂದು ರಹಸ್ಯ ಅಡಗಿದೆ. ಅದನ್ನು ತಿಳಿದುಕೊಳ್ಳಲು ಪ್ರಯತ್ನಿಸಬೇಕು.

ಗಣೇಶನು ಆರ್ಯದೇವತೆಗಳ ಗುಂಪಿನಲ್ಲಿ ಬಂದು ಸೇರಿದವನಾಗಿದ್ದರೂ ಅವನು ಸಂಪೂರ್ಣ ನಮ್ಮವನೇ ಆಗಿದ್ದಾನೆ. ಎರಡುಸಾವಿರ ವರ್ಷಗಳ ಹಿಂದೆ ಆರ್ಯರ ವಿಕಾಸಕ್ರಮದಲ್ಲಿ ಗಣೇಶನು ಸೇರಿಹೋಗಿರುವುದರಿಂದ ಈಗ ಅವನನ್ನು ಬೇರೆಯವನೆಂದು ಹೇಳುವುದೇ ಕಷ್ಟವಾಗಿದೆ. ನಮ್ಮ ವಿದ್ವಾಂಸರ ಬುದ್ಧಿ ಚಮತ್ಕಾರದಿಂದ ಅವನು ಸ್ವಾಭಾವಿಕವಾಗಿ ಪರಿಶುದ್ಧನಾಗಿದ್ದಾನೆ. ಅವನ ದಿಗ್ವಿಜಯವು ಭಾರತೀಯ ಸಂಸ್ಕೃತಿಯ ದಿಗ್ವಿಜಯವಾಗಿದೆ. ಇದು ಹೆಮ್ಮೆ ಪಡಬಹುದಾದ ವಿಷಯ. ಅಧ್ಯಾಯದ ಶೀರ್ಷಕಗಳಲ್ಲಿ ಗಣೇಶ, ವಿನಾಯಕ, ಗಣಪತಿ ಎಂಬುದಾಗಿ ಹೇಳಿದೆ. ಆಯಾಯಾ ಅಧ್ಯಾಯಗಳನ್ನು ಓದಿದರೆ ಶೀರ್ಷಿಕೆಯ ಸಾರ್ಥಕತೆಯು ತಿಳಿದುಬರುತ್ತದೆ.

ಪುಸ್ತಕವನ್ನು ಬರೆಯುವಾಗ ಅಲ್ಲಲ್ಲಿ ಕೆಲವು ಚಿತ್ರಗಳನ್ನು ಪರಿಶೀಲಿಸಿದ್ದೇನೆ. ಬೊಂಬಾಯಿನ ಪ್ರಿನ್ಸ್ ಆಫ್ ವೇಲ್ಸ್ ಮ್ಯೂಜಿಯಮ್‌ನ ಕಲಾವಿಭಾಗದ ಕ್ಯೂರೇಟರ್ ಡಾ॥ ಮೋತೀಚಂದ್ರರು ಕೆಲವು ಅಮೂಲ್ಯ ಸಲಹೆಗಳನ್ನು ಕೊಟ್ಟಿದ್ದಾರೆ. ಅವರಿಗೆ ವಿಶೇಷರೂಪವಾಗಿ ಋಣಿಯಾಗಿದ್ದೇನೆ. ತಿರುವಾಂಕೂರು ರಾಜ್ಯ ಸರ್ಕಾರವು ರಾವ್ ಅವರ ಎಲಿಮೆಂಟ್ಸ್ ಆಫ್ ಹಿಂದು ಇಕನೋಗ್ರಫಿ ಎಂಬ ಗ್ರಂಥದಿಂದ ಚಿತ್ರಗಳನ್ನು ಉದಾಹರಿಸಲು ಅನುಮತಿ ಇತ್ತಿದ್ದಾರೆ. ನೆದರ್‌ಲೆಂಡ್ಸ್ ಸರ್ಕಾರದ ಕೌನ್ಸಿಲ್ ಜನರಲ್ ಶ್ರೀ ಮೇರಿಸನ್ನರು ಡಚ್ ಸರ್ಕಾರದ ಸಂಗ್ರಹಾಲಯದಲ್ಲಿ ರಕ್ಷಿಸಲ್ಪಟ್ಟಿರುವ ಮೂರ್ತಿಗಳ ಚಿತ್ರಗಳನ್ನು ತೆಗೆದುಕೊಳ್ಳಲು ಅನುಮತಿಯನ್ನು ಕೊಟ್ಟಿದ್ದಾರೆ. ಕೆಲವು ಚಿತ್ರಗಳ ಸಂಗ್ರಹವು ಭಾರತ ಕಲಾಭವನ, ಕಾಶಿಯ ರಾಯ್ ಕೃಷ್ಣದಾಸ್ ಹಾಗು ಪ್ರಯಾಗದ ಮುನಿಸಿಪಲ್ ಮ್ಯೂಜಿಯಂ ಸ್ಥಾಪಕರಾದ ರಾ॥ ಬ॥ ಪಂಡಿತ ವ್ರಜಮೋಹನ ವ್ಯಾಸರ ಉಪಯುಕ್ತ ಸಲಹೆ ಮತ್ತು ಸಹಕಾರಗಳಿಲ್ಲದಿದ್ದರೆ ಈ ಕಾರ್ಯ ಪೂರ್ಣವಾಗುತ್ತಿರಲಿಲ್ಲ. ಇವರೆಲ್ಲರಿಗೂ ನಾನು ಕೃತಜ್ಞ

ನಾಗಿದ್ದೇನೆ. ಮದರಾಸಿನ ಮ್ಯೂಜಿಯಂ ಅಧಿಕಾರಿಗಳಿಗೂ ಮತ್ತು ಲಾಹೋರಿನ ಸೆಂಟ್ರಲ್ ಮ್ಯೂಜಿಯಂ ಅಧಿಕಾರಿಗಳಿಗೂ ಸಹ ಕೃತಜ್ಞತೆ ಯನ್ನು ಸಲ್ಲಿಸುವುದು ನನ್ನ ಕರ್ತವ್ಯವಾಗಿದೆ. ಜೈನ ಧರ್ಮದ ವಿಷಯ್ಸ ಶ್ರೀ ಕೈಲಾಸಚಂದ್ರ ಶಾಸ್ತ್ರಿಗಳ ಕೃಪೆಯಿಂದ ಪ್ರಾಪ್ತವಾಯಿತು. ಅವರಿಗ ಸಹ ಋಣಿಯಾಗಿದ್ದೇನೆ.

ಜಾಲಿಪಾದೇವೀ ಕಾಶೀ,                                                    ಸಂಪೂರ್ಣಾನಂದ್.

೨೬ ಮೀನ ೨೦೦೦.

# ಅನುವಾದಕರ ಎರಡು ನುಡಿ

**ವಿಘ್ನಾಯ ವಿಘ್ನನಾಶಾಯ ಸಂಖ್ಯಾತೀತಾಯ ಮಾಯಿನೇ ।**
**ರುದ್ರಾಯ ಭದ್ರರೂಪಾಯ ಗಣಾಧಿಪತಯೇ ನಮಃ ॥**

ಹಿಂದೂ ಧರ್ಮದಲ್ಲಿ ಅದ್ವಿತೀಯ ಬ್ರಹ್ಮೋಪಾಸನೆಯು ಅನೇಕ ಹೆಸರು ಮತ್ತು ರೂಪಗಳಿಂದ ರೂಢಿಯಲ್ಲಿ ಬಂದಿದೆ. ಉಪಾಸಕರು ವಿಭಿನ್ನ ಸಂಪ್ರದಾಯ ಮತ್ತು ಉಪಸಂಪ್ರದಾಯಗಳಿಗೆ ಸೇರಿರುವುದರಿಂದ ಅವರ ಉಪಾಸನಾ ವಸ್ತುವಿನ ರೂಪ ಮತ್ತು ಹೆಸರುಗಳು ವಿಭಿನ್ನ ವಾಗಿವೆ. ಸಾಕಾರೋಪಸನೆಯು ಹಿಂದೂಧರ್ಮದ ಒಂದು ಪ್ರಧಾನ ಅಂಗವಾಗಿದೆ. ಹಿಂದಿನಿಂದಲೂ ಆಕಾಶ, ವಾಯು, ಅಗ್ನಿ ಮತ್ತು ಇಂದ್ರಾದಿ ದೇವತೆಗಳನ್ನು ಬ್ರಹ್ಮನ ಪ್ರತೀಕವೆಂದು ಪೂಜಿಸುತ್ತಿದ್ದರು. ಜಗತ್ತಿನಲ್ಲಿ ರುವ ಪ್ರತಿಯೊಂದು ಪದಾರ್ಥವೂ ಬ್ರಹ್ಮನಿಂದ ಅಭಿನ್ನವೆಂದೇ ಅವರ ಭಾವನೆ. ಆ ಉಪಾಧಿಗಳು ತೋರಿಕೆಗೆ ಸ್ಥೂಲರೂಪ ಮಾತ್ರ. 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ಉಪನಿಷತ್ತಿನಲ್ಲಿ ಪ್ರತಿಪಾದಿತವಾಗಿರುವ ಆ ಬ್ರಹ್ಮವೇ ಅವರ ಸಾಕ್ಷಾತ್ಕಾರದ ಮೂಲವಸ್ತು. ಆ ಚಿತ್ಸ್ವರೂಪ ಬ್ರಹ್ಮವೇ ಅನಾದಿಕಾಲದಿಂದ ದೃಶ್ಯರೂಪವಾಗಿ ಕಾಣುತ್ತಿದೆ. ಜಗತ್ತಿನ ವಸ್ತುಗಳಲ್ಲಿ ಕಾಣುವ ವಿಚಿತ್ರಗಳೆಲ್ಲವೂ ಅದ್ವಿತೀಯ ಪರಮ ಪುರುಷನ ಲೀಲಾವಿನೋದಗಳೇ ಆಗಿವೆ. ಎಲ್ಲಾ ವಸ್ತುಗಳು ಸಾಧಕನಲ್ಲಿಯ ಬ್ರಹ್ಮಬುದ್ಧಿಯಿಂದ ಉಪಾಸ್ಯಗಳಾಗಬಲ್ಲವು. ದೇವತೆಗಳ ಮತ್ತು ಮಹಾ ಪುರುಷರ ಆಂತರಿಕ ಶಕ್ತಿಯಲ್ಲಿ ಬ್ರಹ್ಮನ ಜೀವಂತ ಪ್ರಕಾಶವು ಸೇರಿರು ತ್ತದೆ. ಭಗವಂತನ ಅಸಾಧಾರಣ ಶಕ್ತಿಯು ಅವರಲ್ಲಿ ಕಾರ್ಯೋನ್ಮುಖ ವಾಗಿರುತ್ತದೆ. ಆದಕಾರಣ ಸಾಮಾನ್ಯವಾಗಿ ಜನರು ಅವರ ಕಡೆಗೆ ಆಕರ್ಷಿಸಲ್ಪಡುತ್ತಾರೆ. ಅವರಲ್ಲಿ ಶ್ರದ್ಧಾ ಭಕ್ತಿಗಳು ಹುಟ್ಟಿ ಉಪಾಸಕ ರಾಗುತ್ತಾರೆ. ಆ ಮಹಾಮಹಿಮರೇ ಸಹಜವಾಗಿ ಮನುಷ್ಯರ ಉಪಾ

ಸನಾಪೀಠದಲ್ಲಿ ಅಧಿರೂಢರಾಗುತ್ತಾರೆ. ಸಾಧಕನ ಚಿತ್ತವು ವಿಶಾಲವಾಗಿ ಸೀಮಾತೀತನೊಡನೆ ಯೋಗಾನುಸಂಧಾನಮಾಡಲು ಪ್ರಾರಂಭಿಸುತ್ತದೆ. ಸಾಧಕನು ತನ್ನ ಚಿತ್ತವನ್ನು ಪರಮಾತ್ಮನೊಡನೆ ವಿಲೀನಗೊಳಿಸಿ ಪ್ರೇಮ ಮಯನೂ, ಸರ್ವಜ್ಞನೂ ಮತ್ತು ಸರ್ವಶಕ್ತಿವಂತನೂ ಆದ ಪರಮಾತ್ಮನ ಅಸ್ತಿತ್ವವು ವಿಶ್ವದ ಎಲ್ಲಡೆ ಇದೆಯೆಂಬ ಅನುಭವವನ್ನು ಪಡೆಯಲು ಪ್ರಯತ್ನಿಸುತ್ತಾನೆ.

ಸಾಕಾರೋಪಾಸನೆಯಲ್ಲಿ ಹಿಂದುಗಳು ಮಾನವರನ್ನು ಬ್ರಹ್ಮನ ಸಾಕಾರ ಮೂರ್ತಿಗಳೆಂದು ಪೂಜಿಸುವುದಿಲ್ಲ. ತಮ್ಮ ಕಲ್ಪನಾ ಶಕ್ತಿಯನ್ನು ವಿಸ್ತಾರಗೊಳಿಸಿ, ಬ್ರಹ್ಮನ ಹೊಸ ಹೊಸ ರೂಪಗಳನ್ನು ಸೃಷ್ಟಿಸಿ ಪೂಜಿಸು ತ್ತಾರೆ. ಶಿಲ್ಪಕಲೆಯನ್ನು ಅನುಸರಿಸಿ ರೂಪವಿಲ್ಲದುದಕ್ಕೆ ರೂಪಕೊಡು ತ್ತಾರೆ. ಸೀಮಾತೀತವಾದುದನ್ನು ಭಾವನೆಯ ಸೀಮೆಯೊಳಗೆ ರೂಪಾಂತ ರಿಸುತ್ತಾರೆ. ಆಂತರಿಕ ಆದರ್ಶಗಳನ್ನು ಹೊರಗಿನ ಇಂದ್ರಿಯಗಳಿಗೆ ಗೋಚರಿಸುವಂತೆ ರೂಪವನ್ನು ಕೊಡುತ್ತಾರೆ. ಚಿತ್ರಗಳ ಮೂಲಕವೋ ಮಣ್ಣು, ಮರ, ಅಥವಾ ಶಿಲೆಗಳಲ್ಲಿ ವಿಚಿತ್ರವಾದ ಶಕ್ತಿ, ಸೌಂದರ್ಯ ಮಾಧುರ್ಯ, ಜ್ಞಾನ, ಶಾಂತಿ, ವೈರಾಗ್ಯ ಮತ್ತು ಆನಂದಗಳನ್ನು ತುಂಬಿ ಭಗವಂತನ ಅಸ್ತಿತ್ವವನ್ನು ಪ್ರತಿಬಿಂಬಿಸಲು ಪ್ರಯತ್ನಪಡುತ್ತಾರೆ. ಈರೀತಿಯಾಗಿ ಸಾಧಕನಿಗೆ ತನ್ನ ರುಚಿ ಮತ್ತು ಕಲ್ಪನೆಗೆ ತಕ್ಕಂತೆ ಸರ್ವಾರಾಧ್ಯನೂ, ಅದ್ವಿತೀಯನೂ, ಚಿನ್ಮಯನೂ ಆದ ಪರಬ್ರಹ್ಮನ ಮೂರ್ತಿಗಳನ್ನು ಸ್ಥಾಪಿಸಿ ಪೂಜಿಸುವ ಪದ್ಧತಿ ರೂಢಿಯಲ್ಲಿ ಬಂದಿದೆ. ಮೂರ್ತಿಪುಜೆಯು ಭಗವಂತನ ಪ್ರತೀಕೋಪಾಸನೆಯೇ ಆಗಿದೆ. ಸಾಕಾರ ಮೂರ್ತಿಗಳನ್ನು ಪೂಜಿಸಿ ನಿರಾಕಾರವನ್ನು ಹೊಂದುತ್ತಾರೆ. ಬ್ರಹ್ಮನಿಷ್ಠ ಸಾಧಕರು ಒಂದೇ ಪರತತ್ತ್ವವನ್ನು ವಿವಿಧರೂಪಗಳಿಂದ ಉಪಾಸಿಸತೊಡ ಗಿದರು. ಬ್ರಹ್ಮ, ವಿಷ್ಣು, ಶಿವ, ಕಾಳಿ, ಕಾರ್ತಿಕೇಯ, ಗಣೇಶ ಇತ್ಯಾದಿ ಮೂರ್ತಿಗಳು ಹಾಗೆ ಪೂಜಿಸಲ್ಪಡುವ ವಿಗ್ರಹಗಳಾಗಿವೆ. ಆ ಮೂರ್ತಿಗಳು

ಒಂದಲ್ಲ ಒಂದು ರೀತಿಯಲ್ಲಿ ಸಾಧಕರ ಮನಸ್ಸನ್ನು ಆಕರ್ಷಿಸುವುಗಳಾಗಿವೆ. 'ಸಾಧಕಾನಾಂ ಹಿತಾರ್ಥಾಯ ಬ್ರಹ್ಮಣೋ ರೂಪಕಲ್ಪನಾ' ಎಂಬ ಉಕ್ತಿಯಂತೆ ತಮ್ಮ ರುಚಿಗೆ ತಕ್ಕ ಮೂರ್ತಿಗಳನ್ನು ಆರಾಧಿಸುವುದರಿಂದ ಅದ್ವಿತೀಯ ಪರಬ್ರಹ್ಮನನ್ನು ಆರಾಧಿಸಿದಂತೆಯೇ ಸರಿ. ಈರೀತಿಯಾದ ಮೂರ್ತಿಪೂಜೆ ಅಥವಾ ಪ್ರತಿಕೋಪಾಸನೆಯು, ವೇದಾಂತದರ್ಶನದ ದೇಶಕಲಾತೀತನೂ, ಚಿತ್ತೇಂದ್ರಿಯಾತೀತನೂ ಆದ ಪರಮಾತ್ಮನನ್ನು ಭಾರತೀಯ ಜನಸಾಮಾನ್ಯರ ಪ್ರತ್ಯಕ್ಷ ಅನುಭವಕ್ಷೇತ್ರದಲ್ಲಿ ತಂದಿಳಿಸಿ ಬ್ರಹ್ಮೋಪಾಸನೆಗೆ ಸರ್ವರಿಗೂ ಅಧಿಕಾರವನ್ನು ತಂದುಕೊಟ್ಟದೆ. ಈ ವಿಧವಾದ ಪ್ರತೀಕೋಪಾಸನೆಗಳಲ್ಲಿ ಗಣೇಶೋಪಾಸನೆಯೂ ಒಂದಾಗಿದೆ. ಗಣಪತಿಯ ಪೂಜೆಯು ವೈದಿಕವೆ, ಅವೈದಿಕವೆ, ತಂತ್ರೋಕ್ತವೆ, ಕೇವಲ ಪುರಾಣೋಕ್ತವೆ ಅಥವಾ ಜನಶ್ರುತಿಯೆ ಇತ್ಯಾದಿ ವಿಷಯಗಳನ್ನು ಈ ಕೃತಿಯಲ್ಲಿ ಡಾ|| ಸಂಪೂರ್ಣಾನಂದರು ವಿಶದವಾಗಿ ಸಂಶೋಧಿಸಿದ್ದಾರೆ.

ಇದು "ಗಣೇಶ" ಎಂಬ ಹಿಂದೀ ಮೂಲಗ್ರಂಥದ ಕನ್ನಡ ಅನುವಾದ. ಮೂಲಕೃತಿಕಾರರು ಡಾ|| ಸಂಪೂರ್ಣಾನಂದರು. . ಸಂಸ್ಕೃತ ಹಿಂದೀ ಹಾಗು ಇಂಗ್ಲೀಷಿನಲ್ಲಿ ಉದ್ದಾಮ ಪಂಡಿತರು. ಕಾಶೀ ವಿದ್ಯಾ ಪೀಠದಲ್ಲಿ ಪ್ರಾಧ್ಯಾಪಕರಾಗಿ ಸೇವೆಸಲ್ಲಿಸಿದ್ದಾರೆ. ಸಾಹಿತ್ಯ ಮತ್ತು ರಾಜಕೀಯದಲ್ಲಿ ಸವ್ಯಸಾಚಿಗಳಾಗಿರುವವರಲ್ಲಿ ಇವರೂ ಒಬ್ಬರು. ನಿಜವಾದ ಗಾಂಧೀ ತತ್ವಾನುಯಾಯಿಗಳು. ಕೆಲವುಕಾಲ ಮಧ್ಯಪ್ರದೇಶದ ವಿದ್ಯಾಮಂತ್ರಿಗಳಾಗಿದ್ದು ಅನಂತರ ಮುಖ್ಯಮಂತ್ರಿಗಳಾಗಿದ್ದರು. ಈಗ ರಾಜಾಸ್ಥಾನದ ರಾಜ್ಯಪಾಲರಾಗಿದ್ದಾರೆ. ಅವರ 'ಗಣೇಶ' ಎಂಬ ಪುಸ್ತಕವನ್ನು ಓದುವ ಅವಕಾಶಸಿಕ್ಕಿತು. ಓದಿದ ಅನಂತರ ಕನ್ನಡಿಗರ ಮುಂದಿಡಬೇಕೆಂಬ ಅಭಿಪ್ರಾಯಬಂದಿತು. ಕನ್ನಡದಲ್ಲಿ ಈರೀತಿಯಾದ ಗ್ರಂಥವಿಲ್ಲವೆಂದೇ ಕನ್ನಡಮ್ಮನ ಪಾದದಲ್ಲಿ ಈ ಕುಸುಮವನ್ನಿಡುತ್ತಿದ್ದೇನೆ. ಇದು ಗಣೇಶನ ಶೋಧನಾಪೂರ್ಣ ವಿಮರ್ಶಾಗ್ರಂಥವೆಂದು ತಿಳಿಯ್ಬು

ಬಹುದು. ಈ ಕೃತಿಯನ್ನು ಕನ್ನಡಕ್ಕೆ ತರಲು ಡಾ|| ಸಂಪೂರ್ಣಾನಂದ
ಅನುಮತಿ ಇತ್ತರು. ಅದಕ್ಕಾಗಿ ಅವರಿಗೆ ನನ್ನ ಸಪ್ರೇಮವಂದನೆಗಳ
ಮೂಲದಲ್ಲಿದ್ದ ಕೆಲವು ಚಿತ್ರಗಳಿಗೆ ಬದಲಾಗಿ ಶ್ರೀ ಮುಮ್ಮಡಿ ಕೃಷ್ಣರಾ
ವಡೆಯರ್ ಅವರ "ಶ್ರೀತತ್ತ್ವನಿಧಿ" ಎಂಬ ಗ್ರಂಥದಿಂದ ಹೇರಂಬಗಣ
ಪಂಚಮುಖಗಣಪತಿ, ಷೋಡಶಬಾಹುಗಣಪತಿ, ನೃತ್ಯಗಣಪತಿ ಮತ್ತು
ತುಷ್ಟಗಣಪತಿಯ ಚಿತ್ರಗಳನ್ನು ಉಪಯೋಗಿಸಿಕೊಳ್ಳಲು ಅನುಮ
ಯಿತ್ತು ಪ್ರೋತ್ಸಾಹಿಸಿದ ಪ್ರಾಚ್ಯವಿದ್ಯಾ ಸಂಶೋಧನಾಲಯದ ಡೈರೆ
ರವರಾದ ಶ್ರೀ ಎಚ್. ದೇವೀರಪ್ಪ ಎಂ.ಎ. ಅವರಿಗೆ ಅತ್ಯಂತ ಕೃತಜ್ಞ
ನಾಗಿದ್ದೇನೆ. ಕರಡುಪ್ರತಿಯನ್ನು ನೋಡಿ ಕೆಲವು ಉಪಯುಕ್ತ ಸಲ
ಗಳನ್ನಿತ್ತ ಶ್ರೀಮಾನ್ ವಿದ್ವಾನ್ ಕೆ. ಎಸ್. ಮಹಾಂತದೇವರು ಎಂ.ಎ.
ಮತ್ತು ವಿದ್ವಾನ್ ಎಂ. ಎಸ್. ಬಸವರಾಜಯ್ಯನವರಿಗೆ ವಂದನೆಗಳನ್ನು
ಅರ್ಪಿಸುತ್ತೇನೆ. ಈ ಕಿರುಹೊತ್ತಿಗೆಯ ಪ್ರಕಾಶನದ ಸಂಪೂರ್ಣ
ಜವಾಬ್ದಾರಿಯನ್ನು ವಹಿಸಿಕೊಂಡ ಯೋಗೀಶ ಪ್ರಕಾಶನದವರಿ
ಹೃತ್ಪೂರ್ವಕ ಅನಂತ ಆಶೀರ್ವಾದಗಳು. ಅತ್ಯಲ್ಪಸಮಯದಲ್ಲಿ ಅಂದ
ವಾಗಿ ಮುದ್ರಿಸಿಕೊಟ್ಟ ಶ್ರೀ ಪಂಚಾಚಾರ್ಯ ಪ್ರೆಸ್ಸಿನ ಒಡೆಯರಾ
ಶ್ರೀ ವೇ|| ಮಹದೇವಯ್ಯನವರಿಗೆ ನೆನವರಿಕೆಗಳು.

ಪಿ. ಮರಿಬಸವಾರಾಧ್ಯ

# ಗ್ರಂಥ ಋಣ

1) ಋಗ್ವೇದ ಸಂಹಿತಾ (ಸಾಯಣ ಭಾಷ್ಯ)
2) ಶುಕ್ಲಯಜುರ್ವೇದ ಸಂಹಿತಾ(ಉವ್ವಟ ಮತ್ತುಮಹೀಧರ ಭಾಷ್ಯ)
3) ತೈತ್ತರೀಯ ಆರಣ್ಯಕ
4) ಐತರೇಯ ಬ್ರಾಹ್ಮಣ
5) ಗಣಪತ್ಯಥರ್ವಶೀರ್ಷೋಪನಿಷತ್
6) ವರಾಹ ಪುರಾಣ
7) ಸ್ಕಾಂದ ಪುರಾಣ
8) ಮತ್ಸ್ಯಪುರಾಣ
9) ಅಗ್ನಿ ಪುರಾಣ
10) ಬ್ರಹ್ಮವೈವರ್ತ ಪುರಾಣ
11) ಗಣೇಶ ಪುರಾಣ
12) ಮಾನವ ಗೃಹ್ಯಸೂತ್ರ
13) ಕಾತ್ಯಾಯನ ಶ್ರೌತಸೂತ್ರ
14) ಮಹಾನಿರ್ವಾಣ ತಂತ್ರ
15) ಶಾರದಾ ತಿಲಕ
16) ತಂತ್ರರಾಜ
17) ಮಂಜುಶ್ರೀ ಮೂಲಕಲ್ಪ
18) ಯಾಜ್ಞವಲ್ಕ್ಯಸ್ಮೃತಿ
19) ಶಾಂತಿಮಯೂಖ (ನೀಲಕಂಠ ಭಟ್ಟ)
20) ಪ್ರಾಣತೋಷಿಣೀ
21) ಸಮನ್ವಯ (ಭಗವಾನ್ದಾಸ್)
22) ಸಾಧನಮಾಲಾ
23) ಗಣೇಶ (ಲೇಖನ-ರಾಯ್ ಕೃಷ್ಣದಾಸ್)

24) Ganesh—A Monograph on the Elephant first God by Elis Gette.

25) The Indian Teachers in China by Phanindranath Bhos.

26) Sri Chakrasambhara Tantra (English Translation)

27) Elements of Hindu Iconography by T. A. Gopinath Rao.

# ಪರಿವಿಡಿ

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೨ | ೨೩ | ಬ್ರಾಹ್ಮಣಸ್ಪತಿಗೆ | ಬ್ರಹ್ಮಣಸ್ಪತಿಗೆ |
| ೫ | ೫ | ಶಾತ | ಶ್ರೌತ |
| ೭ | ೧೨ | ಪ್ರೇರಪಿಸು | ಪ್ರೇರೇಪಿಸು |
| ೧೦ | ೧೯ | ಸಂಸ್ಯತ | ಸಂಸ್ಕೃತ |
| ೧೧ | ೭ | ಕೆರೆಯುತ್ತಾರೆ | ಕರೆಯುತ್ತಾರೆ |
| ೧೬ | ೧ | ವಾರಾಹ | ವರಾಹ |
| ೨೨ | ೧೭ | ಸ್ಕಂದ | ಸ್ಕಾಂದ |
| ೨೫ | ೧೯ | ಮಹಾರಾಜಕ | ಮಹಾರಾಜಿಕ |
| ೨೭ | ೧೫ | ಸಿದ್ಧಾಂಥ | ಸಿದ್ಧಾಂತ |
| ೩೧ | ೧ | ಗಣಾಪತ್ಯುಪನಿಷತ್ | ಗಣಪತ್ಯುಪನಿಷತ್ |
| ೩೨ | ೧೪ | ಚತುರ್ಭುಜೆತ್ರಿನೇತ್ರಶ್ಚ | ಚತುರ್ಭುಜಸ್ತ್ರಿನೇತ್ರಶ್ಚ |
| ೩೩ | ೧೦ | ವಿಷದವಾಗಿ | ವಿಶದವಾಗಿ |
| ೪೫ | ೧೨ | ಯೋಗದರ್ಶದ | ಯೋಗದರ್ಶನದ |
| ೪೭ | ೧೦ | ಚತುಷ್ಕೋಖ | ಚತುಷ್ಕೋಣ |
| ೪೭ | ೧೬ | ಚಿನ್ಹೆ | ಚಿಹ್ನೆ |
| ೪೯ | ೮ | ಒಂದಿದೆ | ಬಂದಿದೆ |
| ೬೪ | ೧ | ಧಾನ್ಯ | ಧ್ಯಾನ |
| ೬೫ | ೫ | ಸಿದ್ಧ | ಸಿದ್ಧಿ |
| ೭೦ | ೧೩ | ಭಾರ್ತೀಯ | ಭಾರತೀಯ |
| ೮೧ | ೨೩ | ಧ್ವನೀ | ಧನ್ವೀ |
| ೮೩ | ೧೫ | ಒಂದು | ಬಂದು |

॥ ಓಂ ॥

॥ ಶ್ರೀ ಗಣೇಶಾಯ ನಮಃ ॥



# ಗಣೇಶ

## ಅಧ್ಯಾಯ ೧

### ಶ್ರುತಿಯಲ್ಲಿ ಗಣಪತಿ

ಹಿಂದುಗಳು ವೇದವನ್ನು ಅಪೌರುಷೇಯ ಮತ್ತು ಸ್ವತಃಪ್ರಮಾಣವೆಂದು ನಂಬಿದ್ದಾರೆ. ಧರ್ಮ ಮತ್ತು ಅಧ್ಯಾತ್ಮಜ್ಞಾನಕ್ಕೆ ವೇದವೇ ಪ್ರಮಾಣ. ಇದರ ಸ್ವರೂಪವನ್ನು ವೇದವು ನಿರೂಪಿಸಿರುವ ರೂಪದಲ್ಲಿ ಆಚರಿಸುವುದು ಧರ್ಮನಿಷ್ಠ ಹಿಂದುವಿನ ಕರ್ತವ್ಯವಾಗಿದೆ. ಕೆಲವರು ಕೇವಲ ಸಂಹಿತಾ ಭಾಗವನ್ನೇ ವೇದವೆಂದು ತಿಳಿಯುತ್ತಾರೆ. ಆದರೆ "ಮಂತ್ರಬ್ರಾಹ್ಮಣಯೋರ್ವೇದನಾಮಧೇಯಮ್" ಎಂಬ ಪ್ರಾಚೀನ ವಾಕ್ಯದಂತೆ ಬ್ರಾಹ್ಮಣ ಅಂದರೆ ಆರಣ್ಯಕ ಮತ್ತು ಉಪನಿಷತ್ತುಗಳೂ ಸಹ ವೇದದಲ್ಲಿ ಸೇರಿದವುಗಳೆಂದು ತಿಳಿಯುತ್ತೇವೆ.

**ಗಣಪತಿ** ಎಂಬ ಶಬ್ದವು ವೇದದ ಸಂಹಿತಾ ಭಾಗದಲ್ಲಿ ಕಂಡುಬರುತ್ತದೆ. ಇದರ ಪ್ರಥಮ ಪ್ರಯೋಗವು ಋಗ್ವೇದದ ಎರಡನೇ ಮಂಡಲದ ಇಪ್ಪತ್ತಮೂರನೇ ಸೂಕ್ತದ ಮೊದಲನೇ ಮಂತ್ರದಲ್ಲಿ ಉಕ್ತವಾಗಿದೆ :—

**ಗಣಾನಾಂ ತ್ವಾ ಗಣಪತಿಂ ಹವಾಮಹೆ**
**ಕವಿಂ ಕವೀನಾಮುಪಮಶ್ರವಸ್ತಮ್ ।**
**ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ**
**ಆ ನಃ ಶೃಣ್ವನ್ನೂತಿಭಿಃ ಸೀದಸಾದನಮ್ ॥**

(೨-೨೩-೧)

ಈ ಮಂತ್ರದ ಎರಡನೆಯ ಪಂಕ್ತಿಯಲ್ಲಿ "**ಬ್ರಹ್ಮಣಸ್ಪತಿ**" ಎಂದು ಸಂಬೋಧಿಸಲ್ಪಟ್ಟಿದೆ. ಪ್ರಥಮ ಪಂಕ್ತಿಯಲ್ಲಿರುವ ಗಣಪತಿ ಶಬ್ದವ್ ಬ್ರಹ್ಮಣಸ್ಪತಿಯನ್ನು ಕುರಿತದ್ದೇ ಆಗಿದೆ. ಬ್ರಹ್ಮಣಸ್ಪತಿ ಅಂದರೆ ಬ್ರಹ್ ರುಗಳ ಸ್ವಾಮಿ ಎಂದಾಗುತ್ತದೆ. ಸಾಯಣಾಚಾರ್ಯರು ಬ್ರಹ್ಮ ಪದಕ್ ಮಂತ್ರ ಎಂದು ಅರ್ಥಮಾಡಿದ್ದಾರೆ. ಬ್ರಹ್ಮಣಸ್ಪತಿ ಎಂದರೆ ಮಂತ್ರಗ ಸ್ವಾಮಿ ಎಂದಾಯಿತು. ಈ ಉಪಾಧಿಯು ಕೇವಲ ಬೃಹಸ್ಪತಿಗೆ ಸಂಬ ಧಿಸಿದುದು. ಬ್ರಹ್ಮಣಸ್ಪತಿಯನ್ನು ಗಣಗಳ ಪತಿ ಎಂದು ಹೇಳಿದೆ "ದೇವಾದಿ ಗಣಾನಾಂ ಸಂಬಂಧಿ ಗಣಪತಿಃ" ಅಂದರೆ ದೇವಾದಿ ಗಣ ಳೊಡನೆ ಸಂಬಂಧ ಉಳ್ಳವನು ಗಣಪತಿ. ದೇವಗಣಗಳ ಅಧಿಪ ಗಣಪತಿ ಎಂದು ಸಾಯಣರ ಭಾಷ್ಯದಿಂದ ತಿಳಿದುಬರುತ್ತದೆ. ಮಂತ್ರ ಗಳಿಗೆ ಅಧಿಪತಿ ಹಾಗು ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನೂ ಆದ ಬೃಹಸ್ಪ ತಿಯು ನಮ್ಮ ಪ್ರಾರ್ಥನೆಗಳನ್ನು ಕೇಳಿ ಈ ಯಜ್ಞಸ್ಥಳವನ್ನು ಅಲಂ ರಿಸಲಿ ಎಂಬುದೇ ನಮ್ಮ ಪ್ರಾರ್ಥನೆ.

ಸಾಯಣರ ಈ ಅಭಿಪ್ರಾಯವನ್ನು ಐತರೇಯ ಬ್ರಾಹ್ಮಣದ ನಾಲ್ಕನೇ ಅಧ್ಯಾಯದ ನಾಲ್ಕನೇ ಖಂಡದ ಪ್ರಥಮ ವಾಕ್ಯವು ಪುಷ್ಟಿ ಕರಿಸುತ್ತದೆ:—

**ಗಣಾನಾಂ ತ್ವಾ ಗಣಪತಿಂ ಹವಾಮಹೆ ಇತಿ ಬ್ರಹ್ಮಣಸ್ಪತ್ಯ**

...........................................

ಎಂಬ ಮಂತ್ರವು ಬ್ರಾಹ್ಮಣಸ್ಪತಿಗೆ ಸಂಬಂಧವುಳ್ಳದ್ದಾಗಿದೆ. ಶುಕ್ಲಯಜು

ವೇದದ ಹದಿನಾರನೇ ಅಧ್ಯಾಯದ ಇಪ್ಪತ್ತೈದನೇ ಮಂತ್ರದಲ್ಲೂ ಗಣಪತಿ ಶಬ್ದವು ಕಂಡುಬರುತ್ತದೆ:—

**ನಮೋ ಗಣೇಭ್ಯೋ ಗಣಪತಿಭ್ಯಶ್ಚ ವೋ ನಮಃ |**

ಗಣಗಳಿಗೂ ಗಣಪತಿಗಳಿಗೂ ನಮಸ್ಕಾರವು ಎಂದಿದೆ. ಭಾಷ್ಯಕಾರ ಮಹೀಧರನು "ದೇವಾನುಚರಾಃ ಭೂತವಿಶೇಷ ಗಣಾಃ ಗಣಾನಾಂ ಪಾಲಕಾಃ ಗಣಪತಯಃ" ದೇವತೆಗಳ ಅನುಚರರಾದ ಭೂತಗಳ ವಿಶೇಷ ಗಣವಿರುತ್ತದೆ. ಅವುಗಳ ಪಾಲಕರೇ ಗಣಪತಿಗಳೆಂದು ಹೇಳುತ್ತಾನೆ. ಇಲ್ಲಿ ರುದ್ರಗಣಗಳ ಪರವಾಗಿಯೂ ಅರ್ಥ ಮಾಡಬಹುದು. ಆದರೆ ಗಣಪತಿ ಶಬ್ದವು ಬಹುವಚನದಲ್ಲಿ ಹೇಳಿರುವುದರಿಂದ ರುದ್ರಪರವಾಗಿ ಅರ್ಥಮಾಡಲಾಗುವುದಿಲ್ಲ. ಮಂತ್ರದ್ರಷ್ಟ ಋಷಿಗಳ ಅಭಿಪ್ರಾಯದಲ್ಲಿ ಗಣಪತಿ ಎಂಬ ಹೆಸರನ್ನುಳ್ಳವನು ಒಬ್ಬನಲ್ಲ, ದೇವತೆಗಳ ಅನುಚರರಾದ ಅನೇಕ ನಾಯಕರಿದ್ದಾರೆ. ಅವನು ಎಲ್ಲರಿಗೂ ನಮಸ್ಕರಿಸುತ್ತಾನೆ. ಇವರೆಲ್ಲರೂ ರುದ್ರರೂಪರೆಂಬ ಮಹತ್ವವಿಲ್ಲ. ಏತಕ್ಕೆಂದರೆ ಇದೇ ಅಧ್ಯಾಯದಲ್ಲಿ ಕುಂಭಕಾರ, ಶಸ್ತ್ರಧಾರಿ, ಸಭೆ, ಕಳ್ಳರು, ನಾಯಿ, ಕುದುರೆ ಇತ್ಯಾದಿ ಸಮಸ್ತ ಜಗತ್ತು ರುದ್ರಸ್ವರೂಪವೆಂದು ತಿಳಿದು ನಮಸ್ಕಾರವು ಹೇಳಲ್ಪಟ್ಟಿದೆ.

ಗಣಪತಿಯ ಮೂರನೇ ಉಲ್ಲೇಖವನ್ನು ಯಜುರ್ವೇದದಲ್ಲಿ ಕಾಣಬಹುದು. ಶುಕ್ಲ ಯಜುರ್ವೇದದ ಇಪ್ಪತ್ತಮೂರನೇ ಅಧ್ಯಾಯದ ಹತ್ತೊಂಭತ್ತನೇ ಮಂತ್ರದಲ್ಲಿ:—

**ಗಣಾನಾಂ ತ್ವಾ ಗಣಪತಿಂ ಹವಾಮಹೆ ಪ್ರಿಯಾಣಾಂ ತ್ವಾ ಪ್ರಿಯಪತಿಂ ಹವಾಮಹೆ ನಿಧೀನಾಂ ತ್ವಾ ನಿಧಿಪತಿಂ ಹವಾಮಹೆ ವಸೋ ಮಮ |. ಆಹಮಜಾನಿ ಗರ್ಭಧಮಾತ್ವಮಜಾಸಿ ಗರ್ಭಧಮ್ || (೨೩-೧೯)**

ಎಂದು ಹೇಳಿದೆ. ಋಗ್ವೇದದ ಶಬ್ದಗಳಿಗೂ ಈ ಮಂತ್ರದ ಕೆಲವು ಶಬ್ದಗಳಿಗೂ ಸಾಮ್ಯವಿದೆ. ಈ ಮಂತ್ರವು ಅಶ್ವಮೇಧ ಪ್ರಸಂಗದಲ್ಲಿ ಉಕ್ತವಾಗಿದೆ. ಯಜಮಾನನ ಪತ್ನಿ ರಾಜಮಹಿಷಿಯು ಮೃತ ಅಶ್ವವನ್ನು ಪ್ರದಕ್ಷಿಣೆಮಾಡಿ, ಅದರ ಸಮೀಪದಲ್ಲಿ ಮಲಗಿಕೊಂಡು ಮೇಲಿನ ಮಂತ್ರ ವನ್ನು ಪಠಿಸುತ್ತಾಳೆ. ಇದು ಅಶ್ವವನ್ನು ಸಂಬೋಧಿಸಿ ಹೇಳಿದ್ದು. ಈ ಮಂತ್ರವು ಮಹೀಧರನ ಅಭಿಪ್ರಾಯದಂತೆ ಅಶ್ವದೇವತೆಗಳಿಗೆ ಸಂಬಂಧಿ ಸಿದುದು. ಇದರ ದೇವತೆ ಅಶ್ವ. ಭಾಷ್ಯಕಾರರಾದ ಉವ್ವಟ ಮತ್ತು ಮಹೀಧರರು, ಗಣಗಳಿಗೆ ಸ್ವಾಮಿ ಸ್ತ್ರೀಗಣಗಳ ಪಾಲಕ ಪ್ರಿಯಪತಿ, ಸುಖನಿಧಿಗಳ ಪಾಲಕನೇ! ನಾನು ನಿನ್ನನ್ನು ಆಹ್ವಾನಿಸುತ್ತೇನೆ. ಎಲೈ ವಸುರೂಪನಾದ ಅಶ್ವವೇ ನೀನೆ ನನ್ನ ಪತಿ; ಗರ್ಭಧಾರಣೆಮಾಡುವ ರೇತಸ್ಸನ್ನು ಬಿಡುತ್ತೇನೆ; ನೀನೂ ಸಹ ಗರ್ಭಧಾರಣೆಮಾಡುವ ರೇತ ಸ್ಸನ್ನು ಬಿಡು ಎಂದು ವ್ಯಾಖ್ಯಾನ ಮಾಡಿದ್ದಾರೆ.

ಮೇಲಿನ ಮಂತ್ರವನ್ನು ಗಣಪತಿಯ ಪೂಜಾ ಸಮಯದಲ್ಲಿ ಪಠಿಸುವ ವಾಡಿಕೆ ಕಂಡುಬರುತ್ತಿ. ಇದರ ಅರ್ಥದ ಕಡೆ ಪ್ರಾಯಶಃ ಯಾರ ಮನಸ್ಸು ಹರಿದಿರಲಾರದು. ಭಾಷ್ಯಕಾರರು ಪ್ರತಿಪಾದಿಸಿರುವ ಅರ್ಥವು ನಮ್ಮನ್ನು ಚಕಿತಗೊಳಿಸುತ್ತದೆ. ಇದಕ್ಕೆ ಬೇರೆ ಅರ್ಥಮಾಡುವ ಸಂಭವ ಇರುವುದಿಲ್ಲ. ಇದು ಅಶ್ವಮೇಧಯಜ್ಞದಲ್ಲಿ ಅಂತರ್ಗತವಾದ ಒಂದು ಕರ್ಮ. ಇದರ ಮುಂದಿನ ಮಂತ್ರಗಳಲ್ಲಿ ಇದಕ್ಕಿಂತಲೂ ವಿಚಿತ್ರ ವಾದ ಸಂಗತಿ ಪ್ರತಿಪಾದಿತವಾಗಿರುವುದು ಕಂಡುಬರುತ್ತದೆ. ರಾಜ ಮಹಿಷಿಯಿಂದ ಆ ಸಮಯದಲ್ಲಿ ಮಾಡಬೇಕಾದ ಕರ್ಮಗಳು ಅಶ್ಲೀಲ ಗಳೆಂದು ತಿಳಿದುಬರುತ್ತವೆ. ಇಂದಿಗಿಂತ ಅಂದಿನ ಜನಗಳು ಆ ಕರ್ಮ ಗಳನ್ನು ಅಶ್ಲೀಲಗಳೆಂದು ಭಾವಿಸಿದ್ದಿರಬೇಕು. ಅಲ್ಲಿನ ಹತ್ತು ಮಂತ್ರ ಗಳಲ್ಲಿ ರಾಜಮಹಿಷಿ, ಪುರೋಹಿತ ಹಾಗೂ ಸ್ತ್ರೀಪುರುಷರ ಕೆಳಮಟ್ಟದ ಸಂಭಾಷಣೆಗಳಿವೆ. ಭಾಷ್ಯಕಾರರ ಅಭಿಪ್ರಾಯದಂತೆ ಅವುಗಳು ಅಶ್ಲೀಲ

ಗಳು. ಇಂಥ ಅಶ್ಲೀಲ ಕರ್ಮ ಮತ್ತು ಭಾಷೆಗಳಿಂದ ಮಾಡಿದ ಕರ್ಮವು ಸ್ವರ್ಗಸುಖವನ್ನುಂಟುಮಾಡುವ "ಅಪೂರ್ವ" ವನ್ನು ಹೇಗೆತಾನೆ ಸಾಧಿಸಿ ಕೊಟ್ಟೀತು? ಇದು ವಿಮರ್ಶೆ ಮಾಡಬೇಕಾದದ್ದೆ. ಆದರೆ ಇಲ್ಲಿ ಅಪ್ರಕೃತ. ಭಾಷ್ಯಕಾರರು ಮಾಡಿರುವ ಅರ್ಥ ತಮ್ಮ ಕಲ್ಪನಾ ಪ್ರಪಂಚ ದಿಂದ ಆಯ್ದುದ್ದಲ್ಲ. ಕಾತ್ಯಾಯನನ ಶ್ರೌತಸೂತ್ರದ ಇಪ್ಪತ್ತನೇ ಅಧ್ಯಾಯ ದಲ್ಲಿ ಅಶ್ವಮೇಧಯಜ್ಞ ವಿಧಾನವು ವಿಸ್ತಾರವಾಗಿ ಹೇಳಲ್ಪಟ್ಟಿದೆ. ಇದೇ ಅಧ್ಯಾಯದ ಆರನೇ ಖಂಡದ ಹದಿಮೂರನೇ ಸೂತ್ರದಿಂದ ಹದಿನಾರನೇ ಸೂತ್ರದವರೆವಿಗೆ ಪ್ರತಿಪಾದಿತ ವಿಷಯವು ಮಹೀಧರ ಮತ್ತು ಉವ್ವಟರ ಅರ್ಥವನ್ನು ಸಮರ್ಥಿಸುತ್ತದೆ.

ಹೀಗೆ ಯಜ್ಞದೇವತೆಗಳಲ್ಲಿ ಗಣಪತಿಯ ವಿಷಯವು ಉಕ್ತವಾಗಿರು ವುದಿಲ್ಲ. ಸಂಹಿತಾ ಭಾಗಗಳಲ್ಲಿ ಪ್ರಚಲಿತವಾಗಿರುವ ಹೆಸರುಗಳಲ್ಲಿ 'ಗಣಪತಿ' ಈ ಒಂದು ಹೆಸರು ವಿನಾ ಬೇರೆ ಹೆಸರುಗಳು ಉಕ್ತವಾಗಿಲ್ಲ. ಗಣಪತಿ ಶಬ್ದಪ್ರಯೋಗ ಕಂಡು ಬಂದರೂ ಅದು ಗಣಪತಿಗೆ ಸಂಬಂಧಿಸಿ ದುದಲ್ಲ. ಉದಾಹರಣೆಗಾಗಿ ಶುಕ್ಲ ಯಜುರ್ವೇದದ ಈ ಮಂತ್ರವನ್ನೇ ನೋಡೋಣ:—

ಪ್ರತೂರ್ವನ್ನೇಹ್ಯವಕ್ರಾಮನ್ನಶಸ್ತೀ ರುದ್ರಸ್ಯ
ಗಾಣಪತ್ಯಂ ಮಯೋಭೂರೇಹಿ ।
ಉರ್ವಂತರಿಕ್ಷಂ ವೀಹಿಸ್ವಸ್ತಿ ಗವ್ಯೂತಿರಭಯಾನಿ
ಕೃಣ್ವನ್ಪೂಷ್ಣಾ ಸಯುಜಾ ಸಹ ॥

(೧೧-೧೫)

ಇದರ ಪ್ರಥಮ ಪಂಕ್ತಿಯಲ್ಲಿ ಅಶ್ವವನ್ನು ಆಹ್ವಾನಿಸಿ, ನೀನು ಇಲ್ಲಿಗೆ ಬಾ ನಿನಗೆ ರುದ್ರನ ಗಣಪತಿತ್ವವು ಪ್ರಾಪ್ತವಾಗುವುದು ಎಂದು ಹೇಳಿದೆ. ಎರಡನೇ ಪಂಕ್ತಿಯಲ್ಲಿ ಕತ್ತೆಯನ್ನು ಆಹ್ವಾನಿಸಲಾಗಿದೆ.

ಉಪನಿಷತ್ತುಗಳಲ್ಲಿ ಈಶ, ಕೇನ, ಕಠ, ಪ್ರಶ್ನೆ, ಮುಂಡಕ, ಮಾಂಡೂಕ್ಯ, ಐತರೇಯ, ತೈತ್ತರೀಯ, ಛಾಂದೋಗ್ಯ ಮತ್ತು ಬೃಹದಾರಣ್ಯಕ ಇವುಗಳು ಮುಖ್ಯ ಹಾಗು ಪ್ರಾಮಾಣಿಕವಾದವುಗಳು. ಶಂಕರಾದಿ ಆಚಾರ್ಯರು ಇವುಗಳಿಗೆ ಭಾಷ್ಯಗಳನ್ನು ಬರೆದಿದ್ದಾರೆ. ಇವುಗಳ ಅನಂತರ ಕೌಷೀತಕಿ ಬ್ರಾಹ್ಮಣ ಮತ್ತು ಶ್ವೇತಾಶ್ವತರಗಳು ಮಾನ್ಯಗಳು. ಉಳಿದ ಉಪನಿಷತ್ತುಗಳ ಮಾನ್ಯತೆಯಲ್ಲಿ ವಿವಾದಗಳಿವೆ. ಇವುಗಳ ಸಂಖ್ಯೆ ೬೯ ರಿಂದ ೧೦೮ ಎಂದು ಒಪ್ಪಿಕೊಳ್ಳಲಾಗಿದೆ. ಆದರೆ ಉಪನಿಷದ್ವಾಕ್ಯಕೋಶದ ಪ್ರಕಾರ ಅನೇಕ ಉಪನಿಷತ್ತುಗಳಿವೆ ಎಂದು ತಿಳಿಯುತ್ತದೆ. ಇವುಗಳು ಭಿನ್ನಭಿನ್ನ ಸಂಪ್ರದಾಯಗಳ ಮತಗಳನ್ನು ಪುಷ್ಟೀಕರಿಸುತ್ತವೆ. ಇವುಗಳು ಪ್ರಧಾನ ಉಪನಿಷತ್ತುಗಳಿಗಿಂತ ಅರ್ವಾಚೀನಗಳೆಂದು ಹೇಳಬಹುದು.

ಪ್ರಧಾನ ಉಪನಿಷತ್ತುಗಳಲ್ಲಿ ಎಲ್ಲಿಯೂ ಗಣಪತಿಯ ಹೆಸರು ಉಕ್ತವಾಗಿಲ್ಲ. ಆದರೆ ಗಣಪತ್ಯುಪನಿಷತ್ತು ಅಥವಾ ಗಣಪತ್ಯಥರ್ವಶೀರ್ಷೋಪನಿಷತ್ತೆಂದು ಕರೆಯುವ ಒಂದು ಉಪನಿಷತ್ತು ಇರುವುದು ಕಂಡುಬರುತ್ತದೆ. ಇದನ್ನು ಸಾಂಪ್ರದಾಯಿಕವಾಗಿ ಗೌಣ ಉಪನಿಷತ್ತುಗಳಲ್ಲಿ ಸೇರಿಸಲಾಗಿದೆ. ಇದರ ಪ್ರಾರಂಭದಲ್ಲಿ ಅರ್ವಾಚೀನ ಶೈಲಿಯ ಮಂಗಲಾಚರಣೆ ಇರುವುದನ್ನು ನೋಡಬಹುದು :—

ಯಂ ನತ್ವಾ ಮುನಯಃ ಸರ್ವೇ
ನಿರ್ವಿಘ್ನಂ ಯಾಂತಿ ತತ್ಪದಮ್ ।
ಗಣೇಶೋಪನಿಷದ್ವೇದ್ಯಂ
ತದ್ಬ್ರಹ್ಮೈವಾಸ್ಮಿ ಸರ್ವಗಮ್ ॥

ಗಣೇಶೋಪನಿಷತ್ತಿನಲ್ಲಿ ಪ್ರತಿಪಾದಿತವಾಗಿರುವ ಯಾವ ವಸ್ತುವನ್ನು ನಮಸ್ಕರಿಸಿ ಮುನಿಗಳು ವಿಘ್ನವಿಲ್ಲದೆ ಹೊಂದುತ್ತಾರೆಯೋ ಆ ವಸ್ತುವೇ ಸರ್ವವ್ಯಾಪಿಯಾದ ಬ್ರಹ್ಮ. ಆ ಬ್ರಹ್ಮವೇ ನಾನಾಗಿದ್ದೇನೆ ಎಂದಿದೆ. ಈ

ಉಪನಿಷತ್ತಿನಲ್ಲಿ ಗಣೇಶ, ಗಣಪತಿ, ಮಹಾಗಣಪತಿ, ಏಕದಂತ, ವಕ್ರ ತುಂಡ, ದಂತೀ, ಲಂಬೋದರ ಮತ್ತು ಶಿವಸುತ ಎಂಬ ಹೆಸರುಗಳು ಉಕ್ತವಾಗಿವೆ. ತೈತ್ತರೀಯ ಆರಣ್ಯಕದ ಹತ್ತನೇ ಪ್ರಪಾಠಕದ ಮೊದ ಲನೇ ಅನುವಾಕದಲ್ಲಿ:—

ತತ್ಪುರುಷಾಯ ವಿದ್ಮಹೆ ವಕ್ರತುಂಡಾಯ ಧೀಮಹಿ
ತನ್ನೋ ದಂತಿಃ ಪ್ರಚೋದಯಾತ್ ।

ಈ ಮಂತ್ರ ಬಂದಿದೆ. ಇದರ ವಕ್ರತುಂಡದ ಸ್ಥಾನದಲ್ಲಿ ಮಹಾದೇವ ಮತ್ತು ದಂತಿಯ ಸ್ಥಾನದಲ್ಲಿ ರುದ್ರ ಶಬ್ದವನ್ನು ಸೇರಿಸಿದರೆ ಪ್ರಸಿದ್ಧ ರುದ್ರಗಾಯತ್ರೀ ಮಂತ್ರವಾಗುತ್ತದೆ:—

ತತ್ಪುರುಷಾಯ ವಿದ್ಮಹೆ ಮಹಾದೇವಾಯ ಧೀಮಹಿ
ತನ್ನೋ ರುದ್ರಃ ಪ್ರಚೋದಯಾತ್ ।

ಇದರಲ್ಲಿ ಹೇ ದಂತಿ! ನಮ್ಮನ್ನು ಪ್ರೇರಪಿಸು ಎಂಬ ಪ್ರಾರ್ಥನೆ ಇದೆ. ದಂತಿ ಅಂದರೆ ದಂತವುಳ್ಳವನೆಂದರ್ಥ. ದಂತಿ ಎಂಬಲ್ಲಿ ದಂತಗಳ ಸಂಖ್ಯಾ ನಿರ್ದೆಶವೇನಿಲ್ಲ. ಆದರೂ ದಂತಗಳಲ್ಲಿ ಯಾವುದಾದರೊಂದು ವಿಶೇಷ ವುಳ್ಳವನೇ ದಂತಿಯಾಗಬಲ್ಲ. ಸಾಮಾನ್ಯವಾಗಿ ಗಣೇಶನಿಗೆ ಏಕದಂತ ಏಕರದನ ಎಂಬ ಹೆಸರುಗಳಿವೆ; ಎಂದ ಮೇಲೆ ದಂತಿ ಅಂದರೆ ಗಣೇಶ ನೆಂದಾಯಿತು. ಸೊಟ್ಟವಾದ ಸೊಂಡಲುಳ್ಳವನೆಂದು ಅರ್ಥಕೊಡುವ 'ವಕ್ರತುಂಡ' ಎಂಬ ಹೆಸರೂ ಸಹ ಇದನ್ನು ಪುಷ್ಟೀಕರಿಸುತ್ತದೆ.

ದಂತಿಗೆ ವಕ್ರತುಂಡ ಎಂಬುದರ ಜೊತೆಯಲ್ಲಿ ತತ್ಪುರುಷನೆಂದು ಹೇಳಿದೆ. ರುದ್ರನಿಗೆ ಪ್ರಧಾನವಾದ ಈಶಾನ, ಸದ್ಯೋಜಾತ, ಅಘೋರ ವಾಮದೇವ ಮತ್ತು ತತ್ಪುರುಷ ಎಂಬ ಪಂಚಮುಖಗಳಿವೆ. ದಂತಿ ಯನ್ನು ತತ್ಪುರುಷನೆಂದು ಕರೆಯುವುದರಿಂದ ರುದ್ರನಿಂದ ಅಭಿನ್ನನಾದವ ನೆಂದೋ ಅಥವಾ ರುದ್ರನ ವಿಗ್ರಹವಿಶೇಷದ ಹೆಸರೇ ದಂತಿಯಾಗಿರ

ಬೇಕೆಂದು ಹೇಳಬಹುದು. ಆರಣ್ಯಕದ ಸಮಯದಲ್ಲಿ ತತ್ಪುರುಷನೆಂದು ಕರೆಯುವ ವಕ್ರತುಂಡ ದಂತಿಯು ಮಹಾದೇವ ರುದ್ರನಿಂದ ಅಭಿನ್ನನೆಂದು ತಿಳಿಯಲ್ಪಡುತ್ತಿದ್ದನು. ಆದುದರಿಂದ ದಂತಿಪರ ಮಂತ್ರವು ರುದ್ರಗಾಯತ್ರೀ ಮಂತ್ರದ ಸಮಾನತೆಯನ್ನು ಪಡೆಯುತ್ತದೆ.

ಈ ಪ್ರಕರಣಗಳಿಂದ ಗಣೇಶ ಮತ್ತು ಅವನ ಪೂಜೆಯು ಶ್ರೌತ ವಾಙ್ಮಯದಲ್ಲಿ ಬಹಳ ಅರ್ವಾಚೀನವೆಂದು ತಿಳಿದುಬರುತ್ತದೆ. ಸಂಹಿತೆಗಳಲ್ಲಿ ಗಣಪತಿಯ ಉಲ್ಲೇಖವು ಕಂಡುಬರುವುದಿಲ್ಲ. ಶ್ರುತಿಯಲ್ಲಿ ೩೩ ದೇವತೆಗಳ ಚರ್ಚೆಯು ಅಲ್ಲಲ್ಲಿ ಬರುತ್ತದೆ. ಈ ೩೩ ದೇವತೆಗಳಲ್ಲಿ ಇಂದ್ರ ಮತ್ತು ಪ್ರಜಾಪತಿಯನ್ನು ಬಿಟ್ಟು ೮ ವಸುಗಳು, ೧೨ ಆದಿತ್ಯರು ೧೧ ರುದ್ರರಿದ್ದಾರೆ. ಇವರ ಹೆಸರುಗಳ ವಿಚಾರದಲ್ಲಿ ಶಾಸ್ತ್ರಕಾರರ ಅಭಿಪ್ರಾಯ ಒಂದಾಗಿಲ್ಲವೆಂಬುದು ಕೆಳಗಿನ ಉದಾಹರಣೆಯಿಂದ ತಿಳಿದುಬರುತ್ತದೆ.

ಬೃಹದಾರಣ್ಯಕೋಪನಿಷತ್ತಿನ ಪ್ರಕಾರ:—

**ವಸುಗಳು**:—ಅಗ್ನಿ, ಪೃಥಿವೀ, ವಾಯು, ಆಕಾಶ, ಸೂರ್ಯ, ದ್ಯೌಃ, ಚಂದ್ರ ಮತ್ತು ನಕ್ಷತ್ರ.

**ಆದಿತ್ಯರು**:—ದ್ವಾದಶ ಮಾಸಗಳು.

**ರುದ್ರರು**:—ದಶ ಪ್ರಾಣಗಳು ಮತ್ತು ಆತ್ಮಾ ಅಥವಾ ದಶೇಂದ್ರಿಯಗಳು ಮತ್ತು ಮನಸ್ಸು.

ವಿಷ್ಣುಪುರಾಣದ ಪ್ರಕಾರ:—

**ವಸುಗಳು**:—ಜಲ, ಧ್ರುವ, ಸೋಮ, ಧರ್ಮ, ವಾಯು ಅಗ್ನಿ, ಪ್ರತ್ಯೂಷ ಮತ್ತು ಪ್ರಭಾಸ.

**ಆದಿತ್ಯರು**:—ವಿಷ್ಣು, ಶಕ್ರ, ಆರ್ಯಮಾ, ಧಾತಾ, ತ್ವಷ್ಟಾ ಪೂಷಾ, ವಿವಸ್ವಾನ್, ಸವಿತಾ, ಮಿತ್ರವರುಣ, ಅಂಶು ಮತ್ತು ಭಗ.

**ರುದ್ರರು** :—ಹರ, ಬಹುರೂಪ, ತ್ರ್ಯಂಬಕ, ಅಪರಾಜಿತ ವೃಷಾಕಪಿ, ಶಂಭು, ಕಪರ್ದಿ, ರೈವತ, ಮೃಗವ್ಯಾಧ, ಶರ್ವ ಮತ್ತು ಕಪಾಲಿ.

ವಿಷ್ಣುಪುರಾಣದಲ್ಲಿ ಇಂದ್ರನು ಆದಿತ್ಯರಲ್ಲಿ ಸೇರಿಹೋಗಿದ್ದಾನೆ. ಇಂದ್ರನ ಸ್ಥಳದಲ್ಲಿ ವಷಟ್ಕಾರನನ್ನು ಸೇರಿಸಿ ೩೩ ಸಂಖ್ಯೆಯನ್ನು ಪೂರ್ಣಮಾಡಲಾಗಿದೆ. ಈ ಯಾವ ದೇವತೆಗಳ ಜೊತೆಯಲ್ಲಿಯೂ ಗಣೇಶನ ಹೆಸರು ಬರುವುದಿಲ್ಲ. ಕೆಲವು ಸ್ಥಳಗಳಲ್ಲಿ ಗಣಪತಿ ಶಬ್ದ ಪ್ರಯೋಗವಿದ್ದರೂ ಅಲ್ಲಿಯ ಅರ್ಥ ಗಣಪತಿ ಪರವಾಗದೆ ಅನ್ಯದೇವತೆಯನ್ನು ಸಂಬೋಧಿಸಿದ್ದಾಗಿರುತ್ತದೆ. ಶ್ರೌತ ವಾಙ್ಮಯದಲ್ಲಿ ಗಣಪತಿಗೆ ಸ್ಥಾನವೇ ಇಲ್ಲ. ಭಾಷ್ಯಕಾರರಾಗಲೀ ಅಥವಾ ಅನ್ಯ ಪ್ರಾಮಾಣಿಕ ಗ್ರಂಥಗಳಾಗಲೀ ಗಣಪತಿಯನ್ನು ಪ್ರತಿಪಾದಿಸಿಲ್ಲ.

ಬ್ರಾಹ್ಮಣ ಮತ್ತು ಆರಣ್ಯಕದ ಕಾಲ ಸಂಹಿತೆಗಿಂತ ಅರ್ವಾಚೀನ. ಸಂಹಿತೆಯಲ್ಲಿರುವ ಮಂತ್ರಗಳ ವಿನಿಯೋಗವೇ ಈ ಗ್ರಂಥಗಳ ವಿಷಯ. ಐತರೇಯಬ್ರಾಹ್ಮಣದ ಸಂಬಂಧ ಋಗ್ವೇದದಲ್ಲಿದೆ. ಹಲವರು ವಿನಾಯಕನ ಉಲ್ಲೇಖವು ಐತರೇಯ ಬ್ರಾಹ್ಮಣದಲ್ಲಿದೆ ಎಂದು ಅನುಮಾನಿಸುತ್ತಾರೆ. ಆ ಅನುಮಾನ ಸ್ಪಷ್ಟವಾಗಿಲ್ಲ. ಗಣಪತಿಯ ವಿಷಯವಾಗಿ ಈ ಮಂತ್ರವು (ಬ್ರಾಹ್ಮಣ ೧-೨೧) ಬ್ರಾಹ್ಮಣಸ್ಪತಿ ಅಥವಾ ಬೃಹಸ್ಪತಿ ಪರವಾದದ್ದೆಂದು ಹೇಳುತ್ತದೆ. ತೈತ್ತಿರೀಯ ಆರಣ್ಯಕಕ್ಕೆ ಕೃಷ್ಣಯಜುರ್ವೇದದ ಸಂಬಂಧವಿದೆ. ಇಲ್ಲಿ ಹೇಳಿರುವ ವಕ್ರತುಂಡ ದಂತಿಯನ್ನು ತತ್ಪುರುಷನೆಂದೂ ಅವನು ರುದ್ರನಿಂದ ಅಭಿನ್ನನಾದವನೆಂದು ತಿಳಿಯುತ್ತಿದ್ದರು. ಮಂತ್ರ ಮತ್ತು ಬ್ರಾಹ್ಮಣಗಳ ಮಧ್ಯೆ ಕಾಲಾಂತರ ಎಷ್ಟೆಂದು ಹೇಳುವುದು ವಿವಾದಾಸ್ಪದವಾಗಿದೆ. ಪಾಶ್ಚಾತ್ಯ ವಿದ್ವಾಂಸರು ಇವುಗಳ ಅಂತರ ೩ ಅಥವಾ ೪ ನೂರು ವರ್ಷಗಳೆಂದು ಅಭಿಪ್ರಾಯ ಪಡುತ್ತಾರೆ. ಆರಣ್ಯಕಗಳ ರಚನೆ ಹಾಗು ಅವುಗಳ ಸಂಕಲನದ ಸಮಯದಲ್ಲಿ ಗಣಪತಿ

ಯೆಂದು ಅರ್ಥಕೊಡುವ ದಂತಿಯ ಪ್ರವೇಶವಾಗಿ ಅವನು ಉಪ...
ದೇವತೆಯಾಗಿರಬೇಕು.

ಮಂತ್ರಗಳ ಕಾಲಕ್ಕಿಂತ ಉಪನಿಷತ್ತುಗಳ ಕಾಲ ಇತ್ತೀಚಿನದು. ಪ್ರಧಾನ ಉಪನಿಷತ್ತುಗಳಲ್ಲಿ ಛಾಂದೋಗ್ಯ ಮತ್ತು ಬೃಹದಾರಣ್ಯಕಗಳು ದೊಡ್ಡವು. ವಿದೇಹದ ರಾಜದರ್ಬಾರಿನಲ್ಲಿ ಯಾಜ್ಞವಲ್ಕ್ಯನ ಅಧ್ಯಾ... ಪ್ರವಚನವೇ ಬೃಹದಾರಣ್ಯಕದ ಪ್ರಧಾನ ವಿಷಯ. ಮಂತ್ರದ್ರಷ್ಟೃ... ಗಳಿದ್ದ ವಿದೇಹವು ಬ್ರಹ್ಮಾವರ್ತದಿಂದ ಬಹಳ ದೂರವಿತ್ತು. ಆ ಪ್ರದೇ... ದಲ್ಲಿ ಮಾಠವ ವಿದೇಘನೆಂಬ ರಾಜನು ಮೊದಲು ವೈದಿಕ ಅಗ್ನಿಯನ್ನು ತೆಗೆದುಕೊಂಡು ಹೋದನೆಂದು ಶತಪಥಬ್ರಾಹ್ಮಣವು ಹೇಳುತ್ತ... ಆರ್ಯರು ಸಪ್ತಸಿಂಧುವಿನಿಂದ ಇಲ್ಲಿಗೆ ಬಂದು ನೆಲಸಲು ಅನೇ... ವರ್ಷಗಳು ಆಗಿರಬೇಕು. ಬೃಹದಾರಣ್ಯಕ ಉಪನಿಷತ್ತಿನಲ್ಲಿ ಪರೀಕ್ಷಿ... ವಂಶದ ರಾಜರುಗಳ ಉಲ್ಲೇಖವಿರುವುದರಿಂದ ಇದು ಮಹಾಭಾ... ಯುದ್ಧಾನಂತರದ್ದೆಂದು ತಿಳಿಯುತ್ತದೆ. ಛಾಂದೋಗ್ಯೋಪನಿಷತ್ತಿನ... ಸಪ್ತಸಿಂಧುವಿನ ಕೆಲವು ರಾಜರುಗಳ ಹೆಸರುಗಳಿರುವುದರಿಂದ ಈ ಉ... ನಿಷತ್ತು ಸಂಹಿತಾ ಕಾಲದ ಅನಂತರ ಸಂಕಲಿತವಾಗಿರಬಹುದು. ಈಶೋ... ನಿಷತ್ತು ಶುಕ್ಲಯಜುರ್ವೇದಸಂಹಿತೆಯ ಅಂಗವಾಗಿದೆ. ಉಳಿದ ಉ... ನಿಷತ್ತುಗಳು ಆರಣ್ಯಕಗಳಲ್ಲಿ ಅಂತರ್ಗತಗಳಾಗಿವೆ. ಗೌಣ ಉಪನಿಷ... ಗಳು ಸಂಹಿತಾ ಅಥವಾ ಆರಣ್ಯಕದ ಭಾಗಗಳಲ್ಲಿ ಸೇರುವುದಿಲ್ಲ. ಅವು... ಭಾಷೆ ಬಹಳ ಅರ್ವಾಚೀನ ಸಂಸ್ಕೃತ. ಅವುಗಳ ರಚನಾ ಕಾಲವು ಆಧು... ವೆಂದು ತಿಳಿದುಬರುತ್ತದೆ. ಇಂಥ ಒಂದು ಗೌಣ ಉಪನಿಷತ್ತಿನಲ್ಲಿ ಗ... ಪತಿಯ ಉಲ್ಲೇಖವಿರುವುದು ಕಾಣುತ್ತದೆ. ಈ ಉಪನಿಷತ್ತನ್ನು ಪ್ರ... ಎಂದು ಮಾನ್ಯತೆ ಮಾಡಿದರೂ ಗಣಪತಿಯ ಉಪಾಸನೆಯು ಪ್ರಾಚೀ... ವಾಗಲಾರದು. ಇಲ್ಲಿ ಗಣೇಶನನ್ನು ಶಿವಸುತನೆಂದು ಹೇಳಿದೆ. ಇದರಿಂ... ವಕ್ರತುಂಡ ದಂತಿಯು ಶಿವನಿಂದ ಅಭಿನ್ನನೆಂಬುವುದಕ್ಕೆ ಬದಲಾ... ಭಿನ್ನನೆಂದು ತಿಳಿಯುತ್ತಿದ್ದರು.

ಈ ಬದಲಾವಣೆಗಳು ಅಲ್ಪ ಸಮಯದಲ್ಲಿ ಆಗಿರಲಾರವು. ಯಾವುದೋ ಒಂದು ವಸ್ತುವನ್ನು ತಂದು ದೇವತೆಗಳ ಪಂಕ್ತಿಯಲ್ಲಿ ಸೇರಿಸುವುದು ಸುಲಭವೇನಲ್ಲ. ಹಿಂದಿನಿಂದಲೂ ಉಪಾಸ್ಯನಾದ ರುದ್ರನನ್ನು ಬೇರೆ ಬೇರೆ ಹೆಸರುಗಳಿಂದ ಕರೆಯಬೇಕಾದರೂ ಆಯಾ ಸಮಯದ ಗಾಥಾ ಹಾಗು ಆಖ್ಯಾಯಿಕೆಗಳಲ್ಲಿ ಬಂದಿರುವ ಹೆಸರುಗಳನ್ನು ಉಪಯೋಗಿಸಿರಬೇಕು. ತೈತ್ತರೀಯ ಆರಣ್ಯಕದಲ್ಲಿ ಗಣಪತಿಯ ಮಂತ್ರ ಬಂದಿರುವ ಭಾಗಕ್ಕೆ ನಾರಾಯಣೋಪನಿಷತ್ತೆಂದು ಕರೆಯುತ್ತಾರೆ. ಸಾಯಣರು ಆ ಭಾಗವನ್ನು ಖಿಲ ಖಾಂಡವೆಂದು ಕರೆದಿದ್ದಾರೆ. ಇಲ್ಲಿ ಬಂದಿರುವ ಮಂತ್ರಗಳು ಬೇರೆ ಎಲ್ಲೆಡೆಯಲ್ಲಿಯೂ ಬಂದಿರುವುದಿಲ್ಲ. ಅಲ್ಲಿಯ ಒಂದೊಂದು ಮಂತ್ರಗಳು ಗರುಡ, ದುರ್ಗಾ, ಹಾಗು ನಂದಿಗೆ ಸಂಬಂಧಿಸಿದವುಗಳು. ಇವರಾರೂ ಯಜ್ಞದೇವತೆಗಳಲ್ಲ. ಆದರೆ ವಿದ್ವಾಂಸರು “ ಇತಿ ಊರ್ಧ್ವಂ ತೇಷು ತೇಷು ದೇಶೇಷು ಶ್ರುತಿಪಾಠಾಃ ಅತ್ಯಂತ ವಿಲಕ್ಷಣಾಃ ” ಆಯಾ ದೇಶದಲ್ಲಿ ವಿಲಕ್ಷಣವಾದ ಶ್ರುತಿಪಾಠಗಳು ಕಂಡುಬರುವುದೆಂದು ಅನಿವಾರ್ಯವಾಗಿ ಹೇಳಬೇಕಾಗಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಸಂಹಿತೆಯಲ್ಲಿ ಗರುಡ, ದುರ್ಗಾ, ನಂದಿ ಅಥವಾ ದಂತಿಯ ಉಲ್ಲೇಖವಿರುವುದಿಲ್ಲ. ಆದಕಾರಣ ಈ ಮಂತ್ರಗಳು ಪ್ರಕ್ಷಿಪ್ತಗಳೆಂದು ಹೇಳಬಹುದು.



# ಅಧ್ಯಾಯ ೨

## ವಿನಾಯಕ

ಗಣೇಶನನ್ನು ವಿನಾಯಕನೆಂದು ಕರೆಯುತ್ತಾರೆ. ವಿಶಿಷ್ಟ ನಾಯಕನೇ ವಿನಾಯಕ. ವಿಶೇಷವಾಗಿ ಶಾಸನ ಮಾಡುವವನು ವಿನಾಯಕ. ನಾಯಕತ್ವ ವಹಿಸುವವನೇ ವಿನಾಯಕ. ನಾಯಕನಾಗಬೇಕಾದರೆ ಅವನಿಗೆ ಅನುಯಾಯಿಗಳೂ ಇರಬೇಕು. ದೇವ ವಿಶೇಷಕ್ಕೆ ವಿನಾಯಕನೆಂದು ಕರೆಯುತ್ತೇವೆ.

ವಿನಾಯಕನ ಸ್ವಭಾವ ವಿಘ್ನವನ್ನುಂಟುಮಾಡುವುದು. ಸುಖ ಸಮೃದ್ಧಿ, ಅಧ್ಯಯನ, ಯಜ್ಞ, ಜಪಾದಿಗಳಲ್ಲಿ ವಿಘ್ನವನ್ನುಂಟು ಮಾಡುವ ವಿಘ್ನಕಾರಿಗಳ ಗುಂಪಿನ ನಾಯಕನಿಗೇ ವಿನಾಯಕನೆಂದು ಹೆಸರು. ಇವನನ್ನು ವಿಘ್ನೇಶ್ವರನೆಂದೂ ಕರೆಯುತ್ತಾರೆ. ಇದು ವಿನಾಯಕ ಶಬ್ದದ ಆದಿದೈವಿಕ ಅರ್ಥ. ಯಾವಾಗಲೂ ಮಾನವನಿಗೆ ದುಃಖವನ್ನುಂಟುಮಾಡುವುದು, ಅನುಷ್ಠಾನಗಳನ್ನು ನಿಷ್ಫಲಗಳನ್ನಾಗಿ ಮಾಡುವುದು, ವಿಘ್ನಕಾರಿಗಳ ಕಾರ್ಯವಾಗಿರುತ್ತದೆ. ಇಂಥ ದುಷ್ಟರ ನಾಯಕನು ಮಹಾಶಕ್ತಿವಂತನಾದ ದುಷ್ಟನೇ ಆಗಿರಬೇಕು. ಈ ಅಪದೇವನ ಹೆಸರು ವಿನಾಯಕ. ಇದಲ್ಲದೆ ವಿನಾಯಕ ಶಬ್ದಕ್ಕೆ ಆಧ್ಯಾತ್ಮಿಕವಾಗಿಯೂ ಅರ್ಥವನ್ನು ಹೇಳಬಹುದು. ಯಾಜ್ಞವಲ್ಕ್ಯಸ್ಮೃತಿಯ ಟೀಕೆಯಲ್ಲಿ ವಿಶ್ವರೂಪಾಚಾರ್ಯರು ನಮ್ಮ ಸ್ವೇಚ್ಛಾಪ್ರವೃತ್ತಿಗಳನ್ನು ವಿರೋಧಿಸುವ ರೂಪವೇ ವಿನಾಯಕ. ವ್ಯಾಮೋಹ, ಪ್ರಕೃತಿ ಸಂಬಂಧವಾದ ಅಶುಭಕರ್ಮಗಳ ಸಮುಚ್ಚಯ ಅಥವಾ ಅಶುಭಕರ್ಮಗಳ ಸಂಸ್ಕಾರ ಉಳ್ಳವನೆಂದು ಹೇಳಿದ್ದಾರೆ. ವಿರುದ್ಧಕರ್ಮಾಚರಣೆಯಲ್ಲಿ ಅಗ್ರಣಿಯಾದುದರಿಂದ ವಿನಾಯಕನೆಂಬ ಹೆಸರು ಬಂದಿದೆ ಎಂದು ವಿಶ್ವರೂಪಾಚಾರ್ಯರ ಅಭಿಪ್ರಾಯ.

ಗಣೇಶನ ಅರ್ಥದಲ್ಲಿ ಹೇಳುವ ವಿನಾಯಕ ಶಬ್ದವು ಏಕವಚನಾ

ವಾದುದು. ಇದರಿಂದ ಗಣೇಶನು ಒಬ್ಬನೇ ವ್ಯಕ್ತಿ ಎಂದು ತಿಳಿಯುತ್ತದೆ ಆದರೆ ವಿನಾಯಕ ಶಬ್ದವು ಒಂದೇ ಅರ್ಥದಲ್ಲಿ ಬರುವುದಿಲ್ಲ. ವಿನಾಯಕರು ಬಹುಜನರಿದ್ದಾರೆ. ಅವರೆಲ್ಲರೂ ದುಷ್ಟರೇ. ವಿಷ್ಣುಭಾಗವತದ ದಶಮ ಸ್ಕಂದದ ಪೂತನಿಯ ವಧೆಯ ಕಥೆಯಲ್ಲಿ ಡಾಕಿನೀ, ಯಾತುಧಾನ, ಕೂಷ್ಮಾಂಡ, ಭೂತ, ಪ್ರೇತ, ಪಿಶಾಚ, ಯಕ್ಷ, ರಾಕ್ಷಸ ಮತ್ತು ವಿನಾಯಕ ಇವರೆಲ್ಲರೂ ಹೇಳಲ್ಪಟ್ಟಿದ್ದಾರೆ:—

ಡಾಕಿನ್ಯೋ ಯಾತುಧಾನ್ಯಶ್ಚ
ಕೂಷ್ಮಾಂಡಾ ಯೇಽರ್ಭಕಗ್ರಹಾಃ ।
ಭೂತಪ್ರೇತಪಿಶಾಚಾಶ್ಚ ಯಕ್ಷರಕ್ಷೋ ವಿನಾಯಕಾಃ ॥
(ಭಾ. ೧೦-೬-೨೮)

ಯೋಗದರ್ಶನದ "ಭುವನಜ್ಞಾನಂ ಸೂರ್ಯೇಸಂಯಮಾತ್" ಎಂಬ ಸೂತ್ರದ ಟೀಕೆಯಲ್ಲಿ ವಾಚಸ್ಪತಿಮಿಶ್ರರು ಪಾತಾಳನಿವಾಸಿಗಳಲ್ಲಿ ಕೂಷ್ಮಾಂಡ, ಬೇತಾಳ, ಮಾರೀಚ, ಭೈರವ, ವಿನಾಯಕ ಮತ್ತು ಬ್ರಹ್ಮರಾಕ್ಷಸ ಇವೇ ಮೊದಲಾದ ಹೆಸರುಗಳನ್ನು ಹೇಳಿದ್ದಾರೆ. ಹರಿವಂಶ ದಲ್ಲಿ "ರಾಕ್ಷಸಾಶ್ಚ ಪಿಶಾಚಾಶ್ಚ ಭೂತಾನಿ ಚ ವಿನಾಯಕಾಃ" ರಾಕ್ಷಸರು, ಪಿಶಾಚಿಗಳು, ಭೂತಗಳು, ವಿನಾಯಕರು ಎಂದು ಹೇಳಲ್ಪಟ್ಟಿದ್ದಾರೆ.

ವಿನಾಯಕರಲ್ಲಿ ಮುಖ್ಯರಾದವರು ನಾಲ್ಕು ಜನ. ಯಾಜ್ಞವಲ್ಕ್ಯಸ್ಮೃತಿಯ ಆಚಾರಾಧ್ಯಾಯದಲ್ಲಿ ಮಿತ, ಸಮ್ಮಿತ, ಶಾಲಕಟಂಕಟ ಮತ್ತು ಕೂಷ್ಮಾಂಡರಾಜಪುತ್ರ ಎಂದು ಹೇಳಿದೆ. ಅವರನ್ನು ಪ್ರಸನ್ನರನ್ನಾಗಿ ಮಾಡಲು ಉಪಾಯವೂ ಸಹ ಅಲ್ಲಿಯೇ ಹೇಳಿದೆ. ಆದಾಗ್ಯೂ ಇಲ್ಲಿ ನಾಲ್ಕುಜನ ವಿನಾಯಕರನ್ನು ಬೇರೆಬೇರೆಯಾಗಿ ತೆಗೆದುಕೊಂಡಿದೆ. ಹಾಗೂ ಅವರ ಶಾಂತಿಗಾಗಿ ಉಪಾಯಗಳನ್ನು ಹೇಳಿದೆ.

ಈ ನಾಲ್ಕು ಜನರಿಗೂ ಪೃಥಕ್ಕಾದ ಅಸ್ತಿತ್ವವಿಲ್ಲ. ಪ್ರಕರಣದ ಪ್ರಾರಂಭದಲ್ಲಿ "ವಿನಾಯಕ" ಎಂದು ಏಕವಚನವಿದೆ. ರುದ್ರ ಮತ್ತು






ನಾಲ್ಕು ಜನ ವಿನಾಯಕರು

ಬ್ರಹ್ಮನು ವಿನಾಯಕನನ್ನು ಗಣಗಳಿಗೆ ಅಧಿಪತಿಯನ್ನಾಗಿ ಮಾಡಿದರು ಎಂದು ಉಕ್ತವಾಗಿದೆ. ಮಧ್ಯದಲ್ಲಿ ಒಂದು ಕಡೆ ವಿನಾಯಕನ ತಾಯಿ ಅಂಬಿಕೆಯ ಪೂಜಾವಿಧಾನವಿದೆ. ಇಲ್ಲಿಯೂ ಏಕವಚನಪ್ರಯೋಗವಿದೆ. ಅಂತಿಮ ಶ್ಲೋಕದಲ್ಲಿ ಇಷ್ಟಾರ್ಥಸಿದ್ಧಿಗಾಗಿ ಆದಿತ್ಯ, ತಿಲಕಸ್ವಾಮಿ ಮತ್ತು ಮಹಾಗಣಪತಿ ಇವರುಗಳ ಪೂಜೆಯನ್ನು ಮಾಡಬೇಕೆಂದು ಹೇಳಿದೆ. ಯಾಜ್ಞವಲ್ಕ್ಯಸ್ಮೃತಿಯ ಈ ಅಂಶವು ಸಂಕಲಿತವಾದ ಸಮಯದಲ್ಲಿ ನಾಲ್ಕುಜನ ವಿನಾಯಕರಿದ್ದರು. ಇವರು ಒಂದೇ ಮೂರ್ತಿಯಲ್ಲಿ ಸೇರಿ ಹೋಗಿದ್ದರು. ಆ ಮೂರ್ತಿಯೇ ವಿನಾಯಕ.



ಗಣಪತಿ

ಈ ಮುಖ್ಯವಿನಾಯಕನು ಮಹಾಗಣಪತಿಯಿಂದ ಅಭಿನ್ನನೆಂದು

ತಿಳಿಯಲ್ಪಡುತ್ತಿದ್ದನು. ವಾರಾಹಪುರಾಣದಲ್ಲಿ ವಿನಾಯಕನ ಉತ್ಪತ್ತಿಯ ಸಂಬಂಧದಲ್ಲಿ ಒಂದು ಕಥೆ ಇದೆ :—

ಒಂದು ಸಾರಿ ದೇವತೆಗಳ ಮತ್ತು ತಪೋಧನರ ಮನಸ್ಸಿನಲ್ಲಿ ಒಂದು ವಿಚಾರ ಹುಟ್ಟಿತು. ಜಗತ್ತಿನಲ್ಲಿ ಬಹುತೇಕವಾಗಿ ಸನ್ಮಾರ್ಗಗಾಮಿಗಳ ಕಾರ್ಯಗಳಲ್ಲಿ ವಿಘ್ನಗಳೂ, ದುರ್ಮಾರ್ಗಿಗಳ ಕಾರ್ಯಗಳಲ್ಲಿ ನಿರ್ವಿಘ್ನಗಳು ಉಂಟಾಗುತ್ತಲಿವೆ. ಇದರ ಕಾರಣವನ್ನು ತಿಳಿಯಲು ಯೋಚಿಸತೊಡಗಿದರು. ಎಷ್ಟು ಯೋಚಿಸಿದರೂ ಕಾರಣ ತಿಳಿಯಲಿಲ್ಲ. ಎಲ್ಲರೂ ರುದ್ರನನ್ನು ಶರಣುಹೋಗಬೇಕೆಂದು ನಿಶ್ಚಯಿಸಿ ಅವನಲ್ಲಿ ಬಂದರು. ರುದ್ರನನ್ನು ಸ್ತುತಿಸಿದರು. ದೇವದೇವ ಮಹಾದೇವ! ದುರ್ಮಾರ್ಗಿಗಳ ಕಾರ್ಯಗಳಿಗೆ ವಿಘ್ನವನ್ನುಂಟುಮಾಡೆಂದು ಪ್ರಾರ್ಥಿಸಿದರು. ಶಿವನು ಪ್ರಸನ್ನನಾಗಿ ಉಮೆಯುನ್ನು ನಿರ್ನಿಮೇಶ ದೃಷ್ಟಿಯಿಂದ ನೋಡಿದನು. ಅದೇ ಸಮಯದಲ್ಲಿ ರುದ್ರನ ಮುಖರೂಪ ಆಕಾಶದಲ್ಲಿ ಸುಂದರತೇಜಸ್ವೀ ಬಾಲಕನು ಹುಟ್ಟಿದನು ಅವನ ರೂಪವನ್ನು ನೋಡಿ ದೇವಲೋಕದ ಸ್ತ್ರೀಯರು ಮೋಹಗೊಂಡರು. ಅವನಲ್ಲಿ ಬ್ರಹ್ಮನ ಸರ್ವಗುಣಗಳೂ ವಿರಾಜಿಸುತ್ತಿದ್ದವು. ಆ ಬಾಲಕನು ದ್ವಿತೀಯ ರುದ್ರನಂತೆ ಕಾಣಿಸುತ್ತಿದ್ದನು. ಅವನ ರೂಪವನ್ನು ನೋಡಿ ಪಾರ್ವತಿಗೆ ಸಿಟ್ಟುಬಂದಿತು. ಆವಾಗ ಅವಳು ಹೇ ಕುಮಾರಾ! ನೀನು ಗಜವಕ್ತ್ರ (ಆನೆಮುಖ)ದವನೂ, ಪ್ರಲಂಬಜಠರ (ದೊಡ್ಡ ಹೊಟ್ಟೆ)ದವನೂ ಮತ್ತು ಸರ್ಪೋರುಪವೀತ (ಸರ್ಪಗಳೇ ಜನಿವಾರ) ವುಳ್ಳವನು ಆಗೆಂದು ಶಪಿಸಿದಳು. ಶಿವನಿಗೆ ಬಹಳ ಸಿಟ್ಟುಬಂದಿತು. ಅವನು ತನ್ನ ಶರೀರವನ್ನೊಮ್ಮೆ ಕೊಡವಿದನು. ಅವನ ರೋಮಗಳಿಂದ ಆನೆ ಮುಖದವರು, ಅನೇಕ ಶಿರಸ್ಸಿನವರು, ನೀಲಿಕಣ್ಣಿನ ಕೆಂಪುಬಣ್ಣದವರು, ವಿವಿಧ ಶಸ್ತ್ರಗಳನ್ನು ಧರಿಸಿದ ಅಸಂಖ್ಯಾತ ವಿನಾಯಕರು ಹುಟ್ಟಿದರು. ಭೂಲೋಕದಲ್ಲಿ ಆಹಾಕಾರ ಉಂಟಾಯಿತು. ದೇವತೆಗಳು ಹೆದರಿದರು. ಆ ಸಮಯದಲ್ಲಿ

ಬ್ರಹ್ಮನು ಆಕಾಶದಲ್ಲಿ ಪ್ರತ್ಯಕ್ಷನಾಗಿ ದೇವತೆಗಳೆ! ಹೆದರಬೇಡಿ ನಿಮ್ಮನ್ನು ಅನುಗ್ರಹಿಸಲು ಭಗವಂತನಾದ ತ್ರಿಲೋಚನನು ಈ ವಿನಾಯಕರು ಗಳನ್ನು ಸೃಷ್ಟಿಸಿದ್ದಾನೆ ಎಂದು ಹೇಳಿದನು. ಅನಂತರ ಬ್ರಹ್ಮನು ಹೇ ಶಂಕರ! ಈ ವಿನಾಯಕರೆಲ್ಲರಿಗೂ ನೀನು ಸೃಷ್ಟಿಸಿದ ವಿನಾಯಕನೇ ಅಧಿಪತಿಯಾಗಲಿ; ಇವರನ್ನು ಅನುಗ್ರಹಿಸೆಂದು ಪ್ರಾರ್ಥಿಸಿದನು. ಈಶ್ವರನು ತನ್ನ ಮಗನನ್ನು ಕುರಿತು, ನಿನಗೆ ಭವಪುತ್ರ, ಗಜಾಸ್ಯ, ಗಣೇಶ ಮತ್ತು ವಿನಾಯಕನೆಂಬ ಹೆಸರುಗಳಾಗಲಿ; ಕ್ರೂರರಾದ ಈ ಪ್ರಚಂಡ ವಿನಾಯಕರು ನಿನ್ನ ಸೇವಕರಾಗಲಿ; ಯಜ್ಞಯಾಗಾದಿಕಾರ್ಯ ಗಳಲ್ಲಿ ಮೊದಲು ನಿಮ್ಮ ಪೂಜೆಗಳಾಗಲಿ; ಇಲ್ಲವಾದರೆ ಅಂಥ ಕಾರ್ಯ ಗಳಿಗೆ ವಿಘ್ನವನ್ನುಂಟುಮಾಡಿರಿ ಎಂದು ಆಜ್ಞಾಪಿಸಿದನು. ಅನಂತರ ದೇವತೆಗಳು ಗಣಪತಿಯನ್ನು ಸ್ತುತಿಸಿದರು. ಶಿವನು ಅವುಗಳಿಗೆ ಅಭಿಷೇಕವನ್ನು ಮಾಡಿದನು. ಈ ವಿನಾಯಕನ ಜನ್ಮವಾದ ದಿನವನ್ನೇ ಗಣೇಶಚತುರ್ಥೀ ಎಂದು ಕರೆಯುತ್ತಾರೆ.

ಮನೆಗಳಲ್ಲಿ ವಿನಾಯಕರ ಉಪದ್ರವಗಳು ಪ್ರಾರಂಭವಾದರೆ ಅನೇಕ ಅನಿಷ್ಟ ಸೂಚನೆಗಳು ಕಂಡುಬರುತ್ತವೆ. ಸ್ವಪ್ನದಲ್ಲಿ ಅನೇಕ ಸಿರಸ್ಸುಗಳು, ಗೂಬೆಗಳು, ಕತ್ತಿಗಳು ಕಾಣಿಸಿಕೊಳ್ಳುತ್ತವೆ. ದಾರಿಯಲ್ಲಿ ಹೋಗುತ್ತಿರುವಾಗ ನಮ್ಮ ಹಿಂದೆ ಯಾರೋ ಬರುತ್ತಿರುವ ಹಾಗೆ ಭಾಸ ವಾಗುತ್ತದೆ. ಕಾರಣವಿಲ್ಲದೆ ಮನಸ್ಸು ವ್ಯಾಕುಲಗೊಳ್ಳುತ್ತದೆ. ಅವುಗಳಿಗೆ ಶಾಂತಿಯನ್ನು ಮಾಡದ ಹೊರತು ಮನೆಯಲ್ಲಿ ಶಾಂತಿ ಉಂಟಾಗುವುದಿಲ್ಲ. ಶಾಂತಿಗಾಗಿ ಜಪ, ಪೂಜೆ, ಸತ್ಪುರುಷರಿಗೆ ಭೋಜನಮಾಡಿಸುವುದು ಮತ್ತು ದಾನಧರ್ಮಾದಿ ಪುಣ್ಯಕಾರ್ಯಗಳನ್ನು ಮಾಡಬೇಕು. ಈ ವಿಚಾರದಲ್ಲಿ ಇನ್ನೂ ಹೆಚ್ಚಿನ ಮಾಹಿತಿ ಬೇಕಾದರೆ ಯಾಜ್ಞವಲ್ಕ್ಯ ಸ್ಮೃತಿಯ ಆಚಾರಾಧ್ಯಾಯ, ಭವಿಷ್ಯತ್ಪುರಾಣ, ಮಾನವಗೃಹ್ಯಸೂತ್ರ ಅಥವಾ ನೀಲಕಂಠನ ಶಾಂತಿಮಯೂಖಗಳನ್ನು ನೋಡಬಹುದು. ಕೆಲವು

ಕಡೆ ವಿನಾಯಕರ ಎರಡು ವರ್ಗಗಳಿರುವುದು ಕಂಡುಬರುತ್ತದೆ. ಒಂದು ವೈಷ್ಣವ ವರ್ಗ ಮತ್ತೊಂದು ಗಾಂಗೇಯ ವರ್ಗ. ಮೇಲೆ ಹೇಳಿದ ವಾರಾಹಪುರಾಣದ ಪ್ರಕಾರ ವಿನಾಯಕರಲ್ಲಿ ವರ್ಗಭೇದಗಳಾಗಲೀ ಅಥವಾ ವಿನಾಯಕರಲ್ಲಿ ಪ್ರಮುಖ ಭೇದಗಳಾಗಲೀ ಇರುವುದಿಲ್ಲ. ಪ್ರಧಾನ ವಿನಾಯಕನು ರುದ್ರನ ಅಂಶವೆಂದು ಉಳಿದ ವಿನಾಯಕರುಗಳು ಒಂದೇ ಸಾರಿ ಹುಟ್ಟಿದವರೆಂದು ತಿಳಿದುಬರುತ್ತದೆ. ಅವನನ್ನು ಪೂಜಿಸಿದರೆ ಸತ್ಕರ್ಮಗಳಲ್ಲಿ ಸಿದ್ಧಿಯುಂಟಾಗುತ್ತದೆ. ಪೂಜಿಸದಿದ್ದರೆ ಅಸಿದ್ಧಿಯಾಗುವ ಸಂಭವವೂ ಉಂಟು. ಅವನ ಗಣಗಳೂ ವಿಘ್ನಗಳನ್ನು ಉಂಟುಮಾಡು ವವರೇ ಆಗಿದ್ದಾರೆ. ಗಣನಾಯಕನನ್ನು ತುಷ್ಟನನ್ನಾಗಿ ಮಾಡಿದರೆ ಉಳಿದವರು ಶಾಂತರಾಗುತ್ತಾರೆ. ಪ್ರಧಾನ ವಿನಾಯಕ ಶಿವಸುತ ಅವನ ಹೆಸರು ಗಣೇಶ.

ಅಗ್ನಿಪುರಾಣದ ಗಣಪೂಜಾಧ್ಯಾಯದಲ್ಲಿ ಗಣನಾಯಕನನ್ನು ಗಾಂಗೇಯನೆಂದು ಕರೆಯಲಾಗಿದೆ. ಗಾಂಗೇಯನನ್ನು ಗಜಶೀರ್ಷನೆಂದು ಹೇಳಿರುವುದರಿಂದ ಇವನು ಗಣೇಶನೇ ಇರಬೇಕು. ಯಾಜ್ಞವಲ್ಕ್ಯ ಸ್ಮೃತಿಯ ಆಚಾರಾಧ್ಯಾಯದಲ್ಲಿ ವಿನಾಯಕರುಗಳ ಹೆಸರುಗಳನ್ನು ಹೇಳಿದೆ. ಪ್ರಾರಂಭದಲ್ಲಿ ಅವರ ಸಂಖ್ಯೆ ೬ ಎಂದಿದೆ. ನಾನು ತಿರುವಾಂಕೂರಿನಿಂದ ಪ್ರಕಾಶಿತವಾದ ಅನಂತಶಯನ ಸಂಸ್ಕೃತ ಗ್ರಂಥಾವಳಿಯ ಪ್ರತಿಯನ್ನು ಅನುಸರಿಸಿದ್ದೇನೆ. ಅದರಲ್ಲಿ :—

ಮಿತಶ್ಚ ಸಮ್ಮಿತಶ್ಚೈವ ತಥಾ ಶಾಲಕಟಂಕಟಃ ।
ಕೂಷ್ಮಾಂಡರಾಜಪುತ್ರಶ್ಚ ಜಪೇತ್ ಸ್ವಾಹಾ ಸಮನ್ವಿತಾನ್ ॥

ಬಾಲಕ್ರೀಡಾ ಎಂಬ ಪ್ರಾಚೀನ ಟೀಕೆಯ ಟೀಕಾಕಾರರಾದ ವಿಶ್ವ ರೂಪಾಚಾರ್ಯರು ಈ ಪಾಠವನ್ನೇ ಅನುಸರಿಸಿದ್ದಾರೆ. ಆದರೂ ಇದರ ಪಾಠಗಳು ಭಿನ್ನವಾಗಿರುವುದು ಕಾಣುತ್ತವೆ. ನೀಲಕಂಠ ಭಟ್ಟನ ಶಾಂತಿಮಯೂಖದಲ್ಲಿ :—

ಮಿತಶ್ಚ ಸಮ್ಮಿತಶ್ಚೈವ ತಥಾ ಶಾಲಕಟಂಕಟಾ ।
ಕೂಷ್ಮಾಂಡೋ ರಾಜಪುತ್ರಶ್ಚೇತ್ಯಂತೇ ಸ್ವಾಹಾ ಸಮನ್ವಿತೈಃ ॥

ಎಂದು ಹೇಳಿದ್ದಾನೆ. ಇದರ ಪ್ರಕಾರ ಮಿತ, ಸಮ್ಮಿತ, ಶಾಲ, ಕಟಂಕಟ, ಕೂಷ್ಮಾಂಡ ಮತ್ತು ರಾಜಪುತ್ರ ಎಂದು ಆರು ಜನ ವಿನಾಯಕರಿದ್ದಾರೆ. ಬೇರೆಬೇರೆ ಪ್ರತಿಗಳಲ್ಲಿ ನಾಲ್ಕು ಜನ ವಿನಾಯಕರನ್ನೇ ಹೇಳಿರುವುದರಿಂದ ನನಗೆ ಈ ಪಾಠವು ಸರಿಹೊಂದಲಿಲ್ಲ. ಮಾನವಗೃಹ್ಯ ಸೂತ್ರದ ೨ ನೇ ಪುರುಷದ ೧೪ ನೇ ಖಂಡದಲ್ಲಿ ಶಾಲಕಟಂಕಕ, ಕೂಷ್ಮಾಂಡರಾಜಪುತ್ರ, ಉಸ್ಮಿತ ಮತ್ತು ದೇವಯಜನ ಎಂಬ ನಾಲ್ಕು ಜನ ವಿನಾಯಕರನ್ನೇ ಹೇಳಿದೆ. ಪರಿಶಿಷ್ಟ (ಖ) ದಲ್ಲಿ ಕಾಶಿಖಂಡದ ವಿನಾಯಕರುಗಳ ಹೆಸರುಗಳನ್ನು ನೋಡಬಹುದು.



# ಅಧ್ಯಾಯ ೩

## ಗಣೇಶನ ಜನ್ಮ

ಗಣೇಶ ಮತ್ತು ವಿನಾಯಕ ಒಂದೇ ಎಂದಮೇಲೆ ಹಿಂದಿನ ಅಧ್ಯಾಯದ ಗಣೇಶ ಜನ್ಮದ ಕಥೆಯನ್ನು ಒಂದು ಕಥೆ ಎಂದು ಹೇಳ ಬಹುದು. ಗಣೇಶನ ಜನ್ಮವೃತ್ತಾಂತವನ್ನು ತಿಳಿಸುವ ಅನೇಕ ಕಥೆ ಗಳಿವೆ. ಇವುಗಳಲ್ಲಿ ಪ್ರಧಾನ ವಿನಾಯಕ ಅಂದರೆ ವಿಘ್ನೇಶ್ವರನೇ ಪ್ರಧಾನ ನಾಗಿದ್ದಾನೆ. ಉಳಿದ ವಿನಾಯಕರ ವಿಷಯ ಬರುವುದಿಲ್ಲ. ಗಣೇಶನ ಕಥೆ, ಪ್ರಧಾನವಾಗಿ ಶಿವಪುರಾಣ, ಸ್ಕಂದಪುರಾಣ ಮತ್ತು ಬ್ರಹ್ಮ ವೈವರ್ತಪುರಾಣಗಳಲ್ಲಿ ಕಂಡುಬರುತ್ತದೆ. ಕಂಡುಬರುತ್ತದೆ ಎಂದು ಹೇಳುವುದಕ್ಕಿಂತ ಕಂಡುಬರುತ್ತವೆ ಎಂದರೆ ಸಮಂಜಸವಾಗುತ್ತದೆ. ಏತಕ್ಕೆಂದರೆ ಕಥೆಗಳು ಒಂದಕ್ಕಿಂತ ಒಂದು ಭಿನ್ನವಾಗಿವೆ. ಕಲ್ಪಭೇದ ದಿಂದ ಕಥೆಗಳು ಭಿನ್ನಭಿನ್ನವಾಗಬಹುದು. ಪುರಾಣಗಳಲ್ಲಿ ಅಪಾರ ಶ್ರದ್ಧೆ ಇರುವವರಿಗೆ ಸಮಾಧಾನವಿಷ್ಟೆ. ಒಂದು ಪುರಾಣದಲ್ಲಿ ಯಾವುದೋ ಒಂದು ಕಲ್ಪದ ಘಟನೆ ಇದೆ. ಮತ್ತೊಂದು ಪುರಾಣದಲ್ಲಿ ಮತ್ತೊಂದನ್ನು ವರ್ಣಿಸಲಾಗಿದೆ. ಇಲ್ಲಿ ಕೆಲವು ಕಥೆಗಳನ್ನು ಹೇಳುತ್ತೇವೆ. ಅವುಗಳ ಸಾಮ್ಯವೈಷಮ್ಯಗಳನ್ನು ಚರ್ಚಿಸಲು ಪಾಠಕರಿಗೇ ಬಿಡುತ್ತೇವೆ.

ಶಿವಪುರಾಣದ ರುದ್ರಸಂಹಿತೆಯ ಕುಮಾರಖಂಡದಲ್ಲಿ:—

ಒಂದು ದಿನ ಪಾರ್ವತಿಗೆ ಸ್ನಾನಮಾಡಲು ಇಚ್ಛೆಯಾಯಿತು. ಅವಳು ತನ್ನ ಶರೀರದ ಬೆವರಿನಿಂದ ಒಂದು ಪ್ರತಿಮೆಯನ್ನು ಮಾಡಿದಳು. ಅದಕ್ಕೆ ಚೈತನ್ಯವನ್ನು ಅನುಗ್ರಹಿಸಿ, ತನ್ನ ಸ್ನಾನ ಮುಗಿಯುವವರೆಗೆ ಯಾರನ್ನೂ ಒಳಗೆ ಬಿಡಕೂಡದೆಂದು ಆಜ್ಞೆಮಾಡಿ ಬಾಗಿಲಿನಲ್ಲಿ ಕಾವ ಲಿಟ್ಟಳು. ಆ ದ್ವಾರಪಾಲಕನು ಗಣೇಶನಾಗಿದ್ದನು. ಹೊರಗೆ ಹೋಗಿದ್ದ ಶಂಕರನು ಬಂದನು. ಅವನನ್ನು ದ್ವಾರಪಾಲಕನಾದ ಗಣೇಶನು ಒಳಗೆ

ಬಿಡಲಿಲ್ಲ. ಆಗ ಶಿವಗಣಗಳಿಗೂ ಗಣೇಶನಿಗೂ ಘೋರ ಯುದ್ಧವಾಯಿತು. ವಿಷ್ಣು ಮೊದಲಾದವರೆಲ್ಲರೂ ಯುದ್ಧಮಾಡಿದರು. ಆದರೂ ಗಣೇಶನನ್ನು ಸೋಲಿಸಲಾಗಲಿಲ್ಲ. ಸ್ವಯಂ ಶಂಕರನೇ ಅವನ ಸಿರಸ್ಸನ್ನು ತುಂಡರಿಸಿದನು. ಅಷ್ಟರಲ್ಲಿ ಪಾರ್ವತಿಯು ಸ್ನಾನ ಮುಗಿಸಿಕೊಂಡು ಬಂದಳು. ಗಣೇಶನು ಸತ್ತುಬಿದ್ದಿರುವುದನ್ನು ನೋಡಿ ಪಾರ್ವತಿಗೆ ಬಹಳ ಕೋಪ ಬಂದಿತು. ಪಾರ್ವತಿಯು ಮಾತೃಗಣಗಳೊಂದಿಗೆ ಶಿವಗಣಗಳ ಮೇಲೆ ಯುದ್ಧಮಾಡಿದಳು. ದೇವತೆಗಳು ಸೋತರು. ಆ ಯುದ್ಧವು, ಪಾರ್ವತಿಯು ಜಗತ್ತಿನ ನಾಶಕ್ಕೆ ಹೊರಟಂತಿತ್ತು. ಹೇಗಾದರೂ ಪಾರ್ವತಿಯನ್ನು ಶಾಂತಳನ್ನಾಗಿ ಮಾಡಬೇಕಿತ್ತು. ವಿಷ್ಣುವು ಪಾರ್ವತಿಯನ್ನು ಬಹಳವಾಗಿ ಪ್ರಾರ್ಥಿಸಿದನು. ಆಗ ಪಾರ್ವತಿಯು ತನ್ನ ಗಣೇಶನನ್ನು ಬದುಕಿಸಿದರೆ ಯುದ್ಧ ನಿಲ್ಲಿಸುವುದಾಗಿ ಹೇಳಿದಳು. ಎಲ್ಲಿಂದಲೋ ಒಂದು ಆನೆಯ ತಲೆಯನ್ನು ತಂದು ಗಣೇಶನ ಮುಂಡಕ್ಕೆ ಸೇರಿಸಿದರು. ಗಣೇಶನಿಗೆ ಜೀವ ಬಂದಿತು. ಅನಂತರ ಯುದ್ಧವನ್ನು ನಿಲ್ಲಿಸಲಾಯಿತು. ಅಂದಿನಿಂದ ಗಣೇಶನು ಗಜವದನನಾದನು. ದೇವತೆಗಳೆಲ್ಲರೂ ಅವನನ್ನು ಸ್ತುತಿಸಿದರು. ಅವನಿಗೆ ಗಣಗಳ ನಾಯಕತ್ವವನ್ನು ಕೊಟ್ಟರು. ಎಲ್ಲಾ ಕಾರ್ಯಗಳ ಮೊದಲು ಗಣೇಶನ ಪೂಜೆಯಾಗಬೇಕೆಂದು ಆದೇಶ ಕೊಡಲಾಯಿತು.

ಬ್ರಹ್ಮವೈವರ್ತಪುರಾಣದ ಗಣಪತಿ ಖಂಡದಲ್ಲಿ ಎರಡನೇ ಕಥೆ ಹೀಗೆ ಇದೆ:—

ಶಿವಪಾರ್ವತಿಯರಿಗೆ ವಿವಾಹವಾದ ಬಹಳ ಕಾಲದ ವರೆವಿಗೂ ಮಕ್ಕಳಾಗಲಿಲ್ಲ. ಅವರು ಶ್ರೀಕೃಷ್ಣನ ವ್ರತವನ್ನಾಚರಿಸಿದರು. ಅವರಿಗೆ ಗಣೇಶನು ಹುಟ್ಟಿದನು. ಅವನನ್ನು ನೋಡಲು ದೇವಾದಿದೇವತೆಗಳೆಲ್ಲರೂ ಬಂದರು. ಆದರೆ ಶನಿಯು ಮಾತ್ರ ಬರಲಿಲ್ಲ. ಬಹಳ ಬಲಾತ್ಕಾರ ಮಾಡಿದ ಅನಂತರ ಶನಿಯು ಬಂದನು. ಬಂದರೂ ಮಗುವನ್ನು

ನೋಡದೆ ತಲೆ ತಗ್ಗಿಸಿಕೊಂಡು ನಿಂತಿದ್ದನು. ಪಾರ್ವತಿಯು ಶನಿಯನ್ನು ಮಗುವನ್ನು ಏತಕ್ಕೆ ನೋಡಲಿಲ್ಲವೆಂದು ಕೇಳಿದಳು. ಅದಕ್ಕೆ ಶನಿಯು ನಾನು ಯಾವ ಮಗುವನ್ನು ನೋಡುವೆನೋ ಅದಕ್ಕೆ ಅನಿಷ್ಟವಾಗುವ ದೆಂದು ನನಗೆ ಶಾಪವಿದೆ ಎಂದನು. ಪಾರ್ವತಿಯು ಅವನ ಮಾತನ್ನು ನಂಬಲಿಲ್ಲ. ಮಗುವನ್ನು ನೋಡಲು ಆಗ್ರಹಮಾಡಿದಳು. ಶನಿಯು ಮಗುವನ್ನು ನೋಡುತ್ತಲೇ ಅದರ ಶಿರಸ್ಸು ಕತ್ತರಿಸಿಬಿದ್ದಿತು. ಆಗ ವಿಷ್ಣುವು ಪುಷ್ಪಭದ್ರಾನದಿಯ ದಂಡೆಯಲ್ಲಿ ದಕ್ಷಿಣಕ್ಕೆ ಕಾಲುಚಾಚಿ ಮಲಗಿದ್ದ ಒಂದು ಆನೆಯ ತಲೆಯನ್ನು ತಂದಿಟ್ಟನು. ಮಗುವು ಎಚ್ಚರ ಗೊಂಡಿತು. ಅಂದಿನಿಂದ ಅವನಿಗೆ ಗಣಪತಿ ಪದವಿ ಸಿಕ್ಕಿತು. ಒಂದು ಸಾರಿ ಕಾರ್ತವೀರ್ಯಾದಿ ಕ್ಷತ್ರಿಯರಾಜರುಗಳನ್ನು ಸಂಹರಿಸಿ, ಪರಶು ರಾಮನು ಶಿವಪಾರ್ವತಿಯರ ದರ್ಶನಕ್ಕಾಗಿ ಕೈಲಾಸಕ್ಕೆ ಹೋದನು. ದ್ವಾರದಲ್ಲಿ ಗಣೇಶನು ಅವನನ್ನು ತಡೆದನು. ಇಬ್ಬರಿಗೂ ಯುದ್ಧ ವಾಯಿತು. ಪರಶುರಾಮನ ಕೊಡಲಿಯಿಂದ ಗಣೇಶನ ಒಂದು ಕೋರೆ ಹಲ್ಲು ಮುರಿಯಿತು. ಅಂದಿನಿಂದ ಗಣೇಶನು ಏಕದಂತನಾದನು. ಪರಶು ರಾಮನ ಈ ಕೃತ್ಯವನ್ನು ನೋಡಿ, ಪಾರ್ವತಿಯು ಅವನನ್ನು ಕೊಲ್ಲಲು ಹೊರಟಳು. ವಿಷ್ಣುವು ಮಧ್ಯೆಬಂದು ಸಮಾಧಾನಮಾಡಿದನು.

ಸ್ಕಂದಪುರಾಣದಲ್ಲಿ ಮೂರನೇ ಕಥೆ ಇದೆ:—

ಗಣೇಶನು ಪಾರ್ವತಿಯ ಗರ್ಭದಲ್ಲಿ ಬೆಳೆಯುತ್ತಿದ್ದನು. ಸಿಂಧೂರ ನೆಂಬ ರಾಕ್ಷಸನು ಗುಪ್ತವಾಗಿ ಪಾರ್ವತಿಯ ಗರ್ಭವನ್ನು ಹೊಕ್ಕು ಗಣೇ ಶನ ತಲೆಯನ್ನು ಕತ್ತರಿಸಿದನು. ಆದುದರಿಂದ ಗಣಪತಿಯು ತಲೆ ಇಲ್ಲ ದೆಯೇ ಹುಟ್ಟಿದನು. ಸಿಂದೂರನೆಸಗಿದ್ದ ಕೃತ್ಯವು ಗಣೇಶನಿಗೆ ಜ್ಞಾಪಕ ದಲ್ಲಿತ್ತು. ಕೆಲವುದಿನಗಳನಂತರ ಗಜಾಸುರನನ್ನು ಕೊಂದು ಅವನ ತಲೆ ಯನ್ನು ಇಟ್ಟುಕೊಂಡು ಗಜವದನನಾದನು.

ಲಿಂಗಪುರಾಣದ ಪ್ರಕಾರ ನಾಲ್ಕನೆ ಕಥೆ ಇದೆ:—

ಒಂದುಸಾರಿ ಅಸುರರು ಶಂಕರನನ್ನು ತಪಸ್ಸುಮಾಡಿ ಒಲಿಸಿಕೊಂಡರು. ಅವನಿಂದ ವರವನ್ನು ಪಡೆದು ದೇವತೆಗಳಿಂದ ಅಜೇಯರಾದರು. ದೇವತೆಗಳೂ ಸಹ ಶಿವನನ್ನು ಪ್ರಾರ್ಥಿಸಿದರು. ಶಿವನು ಪ್ರಸನ್ನನಾದನು. ಅವನ ಒಂದಂಶವು ಪಾರ್ವತಿಯ ಗರ್ಭದಲ್ಲಿ ಬೆಳೆಯತೊಡಗಿತು. ಪಾರ್ವತಿಗೆ ಪುತ್ರರತ್ನ ಜನನವಾಯಿತು. ಅವನಿಗೆ ವಿಘ್ನೇಶ್ವರನೆಂದು ನಾಮಕಾರಣ ಮಾಡಿದನು. ಅಸುರರ ಯಜ್ಞಾದಿ ಕಾರ್ಯಗಳಲ್ಲಿ ವಿಘ್ನವನ್ನುಂಟುಮಾಡುವ ಕೆಲಸವನ್ನು ವಹಿಸಿದರು.

ಗಣೇಶನ ಸಂಬಂಧವಾಗಿ ಸುಪ್ರಭೇದಾಗಮದಲ್ಲಿ ಐದನೇ ಕಥೆ ಇದೆ:—

ಶಿವನ ಸೋಮೇಶ್ವರಲಿಂಗದ ಮಹಿಮೆಯಿಂದ ಮಹಾಪಾತಕಿಗಳೂ ಸಹ ಸ್ವರ್ಗಕ್ಕೆ ಹೋಗುತ್ತಿದ್ದರು. ಇದರಿಂದ ದೇವಗಣಗಳು ಹೆದರಿದರು. ಅನಧಿಕಾರಿಗಳು ಸ್ವರ್ಗಕ್ಕೆ ಬರುವುದನ್ನು ತಡೆಯಬೇಕೆಂದು ಶಂಕರನನ್ನು ಪ್ರಾರ್ಥಿಸಿದರು. ನಾನು ಅಸಹಾಯಕನಾಗಿದ್ದೇನೆ, ಪಾರ್ವತಿಯನ್ನು ಪ್ರಾರ್ಥಿಸಿರಿ, ಅವಳು ಸಹಾಯ ಮಾಡುತ್ತಾಳೆ ಎಂದು ಹೇಳಿದನು. ಪಾರ್ವತಿಗೆ ದೇವತೆಗಳ ಸ್ಥಿತಿಯನ್ನು ನೋಡಿ ಕನಿಕರ ಬಂದಿತು. ಅವಳು ವಿಘ್ನೇಶ್ವರನನ್ನು ಸೃಷ್ಟಿಸಬೇಕೆಂದು ನಿಶ್ಚಯಿಸಿದಳು. ಅವಳು ತನ್ನ ಬೆವರನ್ನು ಗಂಗಾನದಿಯಲ್ಲಿ ಬಿಟ್ಟಳು. ಅಲ್ಲಿಯೇ ವಾಸವಾಗಿದ್ದ ಮಾಲಿನೀ ಎಂಬ ಗಜಮುಖರಾಕ್ಷಸಿಯು ಅದನ್ನು ಕುಡಿದಳು. ನವಮಾಸ ತುಂಬಿದಮೇಲೆ ಐದು ಸೊಂಡಿಲುಗಳುಳ್ಳ ಮಗುವಿಗೆ ಆ ರಾಕ್ಷಸಿಯು ಜನ್ಮವಿತ್ತಳು. ಶಂಕರನು ಆ ಮಗುವನ್ನು ತನ್ನ ಮಗನೆಂದು ಸ್ವೀಕರಿಸಿ ಐದು ಸೊಂಡಿಲುಗಳನ್ನು ಸೇರಿಸಿ ಒಂದು ಸೊಂಡಿಲನ್ನಾಗಿ ಮಾಡಿದನು. ಇವನೇ ಗಣಪತಿಯಾದನು. ಸಾಮಾನ್ಯವಾಗಿ ಪುಣ್ಯಕಾರ್ಯಗಳಲ್ಲಿ ವಿಘ್ನವನ್ನುಂಟುಮಾಡುವುದರಿಂದ ವಿಘ್ನೇಶ್ವರ

ನಾದನು. ಇವನನ್ನು ಆರಾಧಿಸುವವರಿಗೆ ವಿಘ್ನವನ್ನು ಹೋಗಲಾಡಿಸಿ ವಿಘ್ನಹರನೂ ಆದನು.

ಇದೇರೀತಿಯಾಗಿ ಮತ್ತೊಂದು ಕಥೆ ಇದೆ:—

ಶಿವಪಾರ್ವತಿಯರು ಗಜರೂಪವನ್ನು ಧರಿಸಿ ಕೆಲವು ದಿನಗಳವರೆಗೆ ವಿಹರಿಸುತ್ತಿದ್ದರಂತೆ. ಆ ಸಮಯದಲ್ಲಿ ಹುಟ್ಟಿದವನೇ ಗಣಪತಿಯಂತೆ. ಒಂದುಸಾರಿ ಶಿವನೇ ಸಿಟ್ಟಿನಿಂದ ಗಣಪತಿಯ ಕೋರೆಯನ್ನು ಮುರಿದನಂತೆ. ಈರೀತಿಯಾಗಿ ಪುರಾಣ ಮತ್ತು ಉಪಪುರಾಣಗಳಲ್ಲಿ ಕಥೆಗಳಿರುವುದು ಕಂಡುಬರುತ್ತದೆ. ಎಲ್ಲಾ ಪುರಾಣಗಳಿಗಿಂತ ಶಿವಪುರಾಣದ ಕಥೆಯೇ ಹೆಚ್ಚು ಪ್ರಚಾರದಲ್ಲಿದೆ. ಉಳಿದ ಕಥೆಗಳ ಕೆಲವು ಅಂಶಗಳು ಇದಕ್ಕೆ ಹೊಂದಿಕೊಳ್ಳುತ್ತವೆ. ದಂತಕಥೆಗಳು ಎಷ್ಟೋ ಇವೆ. ಪುರಾಣಗಳಲ್ಲಿ ಎಲ್ಲಿಯೂ ಅವು ಉದಾಹರಿಸಲ್ಪಟ್ಟಿಲ್ಲ. ಈ ಅಧ್ಯಾಯದಲ್ಲಿರುವ ಕಥೆಗಳಿಗೂ ಹಿಂದೆ ಬಂದಿರುವ ಗಣೇಶೋತ್ಪತ್ತಿಯ ಪ್ರಸಂಗಕ್ಕೂ ಕೆಲವು ಅಂಶಗಳಲ್ಲಿ ಸಾಮ್ಯವಿರುವುದನ್ನು ಇಲ್ಲಿ ನೋಡಬಹುದು.

೧) ಗಣೇಶನು ಸ್ವಾಭಾವಿಕವಾಗಿ ವಿಘ್ನವನ್ನುಂಟುಮಾಡುವವನು. ಅವನ ಅನುಚರರೂ ಸಹ ತೊಂದರೆಯನ್ನುಂಟುಮಾಡುವವರೇ ಆಗಿದ್ದಾರೆ.

೨) ಅವನು ಸಂತುಷ್ಟನಾದರೆ ವಿಘ್ನಗಳನ್ನು ನಾಶಮಾಡುತ್ತಾನೆ.

೩) ಶಿವನು ತನ್ನ ಪುತ್ರನನ್ನಾಗಿ ಸ್ವೀಕರಿಸಿ ಗಣಗಳಿಗೆ ಅಧಿಪತಿಯನ್ನಾಗಿ ಮಾಡಿದನು.

೪) ಒಂದಲ್ಲ ಒಂದು ರೀತಿಯಲ್ಲಿ ಪಾರ್ವತಿಯೇ ತಾಯಿಯಾಗಿದ್ದಾಳೆ.

೫) ಪ್ರಾರಂಭದಲ್ಲಿ ಅವನು ಗಜವದನನಾಗಿರಲಿಲ್ಲ. ಯಾವುದೋ ರೀತಿಯಲ್ಲಿ ಆನೆಯ ಸೊಂಡಿಲನ್ನು ಅವನಿಗೆ ಕೊಡಲಾಯಿತು. ಮಾಲಿನಿ

ರಾಕ್ಷಸಿಯ ಕಥೆಯಲ್ಲಿ ಮಾತ್ರ ಸೊಂಡಿಲು ಸಹಿತವಾಗಿಯೇ ಜನಿಸಿದನು ಎಂದು ಉಕ್ತವಾಗಿದೆ. ಆದರೆ ಐದು ಸೊಂಡಿಲುಗಳಿದ್ದವು. ಒಂದನ್ನು ಬಿಟ್ಟು ಉಳಿದವುಗಳನ್ನು ಕತ್ತರಿಸಲಾಯಿತು.

೬) ಅವನಿಗೆ ಯಾವುದಾದರೊಂದು ಯುದ್ಧಮಾಡಿದ ಮೇಲೆಯೇ ಗಣಪತಿ ಸ್ಥಾನವು ಸಿಕ್ಕಿರುವುದು.

ಈಗ ನಾವು ಗಣಪತಿಯ ಗಣಗಳ ವಿಚಾರವಾಗಿ ಆಲೋಚಿಸ ಬೇಕು. ಗಣಪತಿಗೆ ತನ್ನದೇ ಆದ ಒಂದು ಸೈನ್ಯವಿದೆ. ವಾರಾಹ ಪುರಾಣದಲ್ಲಿ ಹೇಳಿರುವಂತೆ ಶಂಕರನ ದೊಡ್ಡ ಸೈನ್ಯದಲ್ಲಿ ಇವುಗಳನ್ನು ಸೇರಿಸಲಾಗಿದೆ. ಆ ಸೈನ್ಯವನ್ನೆಲ್ಲಾ ಗಣಪತಿಯ ಗಣವನ್ನಾಗಿ ಮಾಡ ಲಾಯಿತು. ಇದಲ್ಲದೆ ಭೈರವ, ಬೇತಾಳ, ವಿದ್ಯಾಧರ, ಯಕ್ಷರಾದಿ ಅಪದೇವತೆಗಳು ಮತ್ತು ಉಪದೇವತೆಗಳು ರುದ್ರನ ಅನುಯಾಯಿ ಗಳಾಗಿದ್ದಾರೆ. ಇವರುಗಳಲ್ಲಿ ಅನೇಕರ ಹೆಸರುಗಳು ಪುರಾಣಗಳಲ್ಲಿ ಕಂಡುಬರುತ್ತವೆ. ವಿನಾಯಕನಂತೆ ಭೈರವನಿಗೂ ಪೂಜಾದಿಗಳು ಸಲ್ಲುತ್ತಿವೆ.

ಗಣ ಎಂದರೆ ಸಮೂಹ ಎಂದರ್ಥ. ಕೆಲವು ದೇವತೆಗಳ ಹೆಸರು ವ್ಯಕ್ತಿವಾಚಕಗಳು, ಕೆಲವು ಜಾತಿವಾಚಕಗಳು. ಇಂದ್ರ ವ್ಯಕ್ತಿವಾಚಕ. ವಸು ಜಾತಿ ವಾಚಕ. ವಸುಗಳಲ್ಲಿ ೮ ಭೇದಗಳಿವೆ. ಆದಿತ್ಯ, ವಸು ಮತ್ತು ರುದ್ರ ಇವು ಜಾತಿವಾಚಕಗಳು. ಇವರುಗಳನ್ನು ಗಣದೇವತೆ ಗಳೆಂದು ಕರೆಯುತ್ತಾರೆ. ಭೌದ್ಧಕಾಲದಲ್ಲಿ ತುಷಿತ, ಮಹಾರಾಜಿಕ, ಅಭಾಸ್ವರ ಇತ್ಯಾದಿ ಕೆಲವು ಹೊಸ ಹೆಸರುಗಳನ್ನು ತೆಗೆದುಕೊಳ್ಳಲಾಗಿದೆ. ಇಂದ್ರ ಮತ್ತು ವಸುಗಳು ಗಣಪತಿಯ ಅಧೀನರಲ್ಲ. ಶಂಕರನ ಸೇವಕರಿಗೆ ಗಣಪತಿಯು ಅಧಿಪತಿ. ಈ ಸೇವಕರು ಅನೇಕ ವರ್ಗಗಳಾಗಿ ವಿಭಾಗಿಸಲ್ಪಟ್ಟಿದ್ದಾರೆ. ಇವರಲ್ಲಿ ಅನೇಕ ಗಣಗಳಿವೆ. ಆ ಗಣಗಳಿಗೆ ಅಧಿಪತಿಯನ್ನು ಗಣಪತಿ ಎಂದು ಕರೆಯುತ್ತಾರೆ.

ಶಿವಗಣಗಳ ವರ್ಣನೆಯು ಮತ್ಸ್ಯಪುರಾಣದ ೧೫೩ನೇ ಅಧ್ಯಾ
ದಲ್ಲಿ ಬಂದಿರುತ್ತದೆ. ಅವರಲ್ಲಿ ಹುಲಿಮುಖದವರು, ಆನೆಮುಖದವ
ಬಡಕಲು ಶರೀರದವರು, ಸ್ಥೂಲಶರೀರದವರು, ಹಸುವಿನ ಕಿವಿಯವ
ಆನೆಯ ಕಿವಿಯವರು, ಪುಷ್ಪಧಾರಿಗಳು, ಸರ್ಪಧಾರಿಗಳು, ಧ
ಪಾನಿಗಳು, ರಕ್ತಕುಡಿಯುವವರಾದಿಯಾಗಿ ವರ್ಣಿಸಲ್ಪಟ್ಟಿದ್ದಾ
ಶಂಕರನು ಪಾರ್ವತಿಯನ್ನು ಕುರಿತು, ಈ ಗಣಗಳು ಜಗತ್ತಿನ ಎಲ್ಲ
ಯಲ್ಲಿಯೂ ಇದ್ದಾರೆ, ಇವರು ಅಸಂಖ್ಯಾತರು. ತೀರ್ಥವನ್ನು ಸೇ
ವವರು, ನಿಯಮಪಾಲಕರು, ತಪಸ್ಸನ್ನಾಚರಿಸುವವರು ಮತ್ತು ಬ್ರ
ಚಾರಿಗಳು ನನ್ನನ್ನು ಭಜಿಸಿದರೆ ಕೈಲಾಸವನ್ನು ಹೊಂದುವರು ಎ
ಹೇಳಿರುತ್ತಾನೆ. ಈ ಗಣಗಳಲ್ಲಿ ಒಬ್ಬನು ಸುಂದರಬಾಲಕನ ರ
ದಲ್ಲಿದ್ದನು. ಕಮಲದ ಹಾರ ಕೊರಳಲ್ಲಿ ಶೋಭಿಸುತ್ತಿತ್ತು ಗಾನ ಮ
ವಾದ್ಯಮಾಡುತ್ತಿದ್ದ ಗಣಗಳ ಹಿಂದೆ ಆ ಬಾಲಕನು ಹೋಗುತ್ತಿ
ಅವನ ಹೆಸರು ವೀರಕ. ಅವನನ್ನು ನೋಡಿ ನನಗೂ ಇಂಥ ಪುತ್ರನ
ಬೇಕೆಂದು ಉಮೆಗೆ ಇಚ್ಛೆ ಅಂಕುರಿಸಿತು. ಶಂಕರನಲ್ಲಿ ತನ್ನ ಇ
ಯನ್ನು ಪ್ರಕಟಪಡಿಸಿದಳು. ಆ ಬಾಲಕನನ್ನೇ ಪುತ್ರನನ್ನಾಗಿ ಮಾಡಿ
ಎಂದು ಶಂಕರನು ಹೇಳಿದನು. ಪಾರ್ವತಿಯು ಆ ವೀರಕನ
ಪುತ್ರನನ್ನಾಗಿ ಮಾಡಿಕೊಂಡಳು. ಶಿವನು ತನ್ನ ಗಣಗಳ ಅಧಿಪತಿಯಾ
ಗಣಪತಿಗಿಂತ ಪ್ರಧಾನವಾದ ಗಣಧರ ಪದವಿಯನ್ನು ಆ ಬಾಲಕ
ಅನುಗ್ರಹಿಸಿದನು. ಅವನೇ ಪ್ರಧಾನ ಗಣಪತಿ ಅಥವಾ ಮಹಾಗಣ
ಯಾದ. ಅವನನ್ನೇ ಗಣೇಶನೆಂದು ಪೂಜಿಸುತ್ತಾರೆ. ಈ ವೀರಕ ಗಣೇ
ಹೆಸರು ಈ ಆಖ್ಯಾಯಿಕೆಯಲ್ಲಿ ಹೇಗೆ ಬಂದಿತೆಂದು ಹೇಳಲು ಕಷ್ಟಸಾ
ಹೇಗೋ ಶರೀರಾಂತರಗಳನ್ನು ಧರಿಸಿ ಗಣೇಶನಾದನು. ಇದು ಅಸಂ
ವಾದುದೆಂದು ಹೇಳಲಾಗುವುದಿಲ್ಲ. ಈರೀತಿಯಾದ ೧೫೦ ಮೂರ್ತಿಗ
ಮಧ್ಯಭಾರತದ 'ಭೂಮರ' ಎಂಬಲ್ಲಿ ಸಿಕ್ಕಿವೆ. ಇವುಗಳನ್ನು ಅಲ
ಬಾದಿನ ಪೌರಸಭೆಯ ವಸ್ತುಸಂಗ್ರಹಾಲಯದಲ್ಲಿ ನೋಡಬಹುದು.

ಒಬ್ಬ ಬ್ರಾಹ್ಮಣಿಯ ಗರ್ಭದಲ್ಲಿ ಗಣನೆಂಬ ರಾಕ್ಷಸನು ಹುಟ್ಟಿದನು. ಅವನು ಜಗತ್ತಿನಲ್ಲಿ ಬಹಳ ತೊಂದರೆಯನ್ನುಂಟುಮಾಡುತ್ತಿದ್ದನು. ಕಪಿಲ ಮಹರ್ಷಿಯ ಪ್ರಾರ್ಥನೆಯಂತೆ ಗಣೇಶನು ಅವನನ್ನು ಕೊಂದನು. ಈರೀತಿಯಾಗಿ ಗಣಪತಿಯು ಜಗತ್ತಿನಲ್ಲಿ ವಿಘ್ನಹರನಾಗಿ ಬೆಳಗಿದನು.

ಶಂಕರನ ಸಮಸ್ತ ಗಣಗಳಿಗೆಲ್ಲಾ ಗಣಪತಿಯು ಅಧಿಪತಿಯಲ್ಲ. ವೀರಶೈವರ ಸಂಪ್ರದಾಯದಂತೆ ಸೃಷ್ಟಿಯ ಆದಿಯಲ್ಲಿ ಶಿವನ ಪಂಚ ಮುಖಗಳಿಂದ ಶಿವಕಲ್ಪ ಯೋಗೀಶ್ವರರು ಉದ್ಭವಿಸಿದರು. ಜಗತ್ತಿನಲ್ಲಿ ರುವ ಸಂಸಾರೀ ಜೀವಿಗಳಿಗೆ ಮಂಗಳವನ್ನುಂಟುಮಾಡುವುದಕ್ಕಾಗಿಯೇ ಇವರ ಅವತಾರವಾಗಿದೆ. ಇವರು ಅಯೋನಿಜರು. ಇವರು ಒಂದೊಂದು ಶಿವಲಿಂಗದಿಂದ ಉದ್ಭವಿಸಿದವರು. ಸೋಮೇಶ್ವರಲಿಂಗದಿಂದ ರೇಣುಕಾ ಚಾರ್ಯರು, ವಟವೃಕ್ಷ ಸಿದ್ಧೇಶ್ವರಲಿಂಗದಿಂದ ದಾರುಕಾಚಾರ್ಯರು, ರಾಮನಾಥಲಿಂಗದಿಂದ ಏಕೋರಾಮಾರಾಧ್ಯರು, ಮಲ್ಲಿಕಾರ್ಜುನಲಿಂಗ ದಿಂದ ಪಂಡಿತಾರಾಧ್ಯರು ಮತ್ತು ವಿಶ್ವನಾಥಲಿಂಗದಿಂದ ವಿಶ್ವಾರಾಧ್ಯರು ಉದ್ಭವಿಸಿದರು. ಇವರನ್ನು ಶಿವಗಣಗಳೆಂದು ಕರೆಯುತ್ತಾರೆ. ಇದಕ್ಕೆ ಆಧಾರ ಹಾಗು ಪ್ರಾಮಾಣಿಕ ಗ್ರಂಥ ಸಿದ್ಧಾಂತಶಿಖಾಮಣಿಯಾಗಿರು ತ್ತದೆ. ಇದರಲ್ಲಿ ಅಗಸ್ತ್ಯಮುನಿಗಳಿಗೆ ರೇಣುಕಾಚಾರ್ಯರು ವೀರಶೈವ ಸಿದ್ಧಾಂತವನ್ನು ಉಪದೇಶ ಮಾಡಿರುತ್ತಾರೆ. ಅಗಸ್ತ್ಯರು ಆಚಾರ್ಯ ರನ್ನು ಗಣನಾಥ, ಗಣನಾಯಕರೆಂದು ಸಂಬೋಧಿಸಿರುವುದು ಕಂಡು ಬರುತ್ತದೆ. ಈ ಗ್ರಂಥದ ಆದಿಯಲ್ಲಿ ಶಿವನು ರೇಣುಕ ಗಣನಾಥನನ್ನು ಶಿವಾದ್ವೈತವನ್ನು ಭುವಿಯಲ್ಲಿ ಸ್ಥಾಪಿಸಲು ಕಳುಹಿಸಿಕೊಟ್ಟ ವಿಷಯ ವಿದೆ. ವಿನಾಯಕನ ವಶವರ್ತಿಯಾದ ಗಣಗಳಿಂದ ಈ ಮಹಾಸಿದ್ಧಿ ಗಣನಾಥರು ಭಿನ್ನರಾದವರೆಂಬುದು ಸ್ಪಷ್ಟವಾದ ವಿಷಯವಾಗಿರುತ್ತದೆ.



## ಅಧ್ಯಾಯ ೪

## ಗಣಪತಿಯ ಸ್ಮಾರ್ತ ಪೂಜೆ

ಗಣಪತಿಯ ಪೂಜೆಯ ಸೂಕ್ಷ್ಮ ಪರಿಚಯವನ್ನು ಗ
ವಿನಾಯಕ ಎಂಬ ಅಧ್ಯಾಯದಲ್ಲಿ ಮಾಡಿಕೊಡಲಾಗಿದೆ. ಈ ಪೂಜೆ
ಮುಖ್ಯವಾಗಿ ಶಾಂತಿಗಾಗಿಯೇ ಮಾಡಲ್ಪಡುತ್ತಿದೆ. ಇದಲ್ಲದೆ ಗೃಹ
ಗಣಪತಿಯನ್ನು ತಮ್ಮ ಮನೆಗಳಲ್ಲಿಯೂ ಸಹ ಮಂಗಳಕಾರ್ಯ
ಪೂಜಿಸುತ್ತಾರೆ. ಈ ಪೂಜೆಗಳಲ್ಲಿ ಹೇಳುವ ಪ್ರಾರ್ಥನೆಗಳು ಪ
ಪುರಾಣಗಳಿಂದ ಆಯ್ದವುಗಳೇ ಆಗಿವೆ. ಶಿವಪುರಾಣ, ವಾರಾಹಪು
ಮತ್ಸ್ಯಪುರಾಣ, ಸ್ಕಂದಪುರಾಣ, ಬ್ರಹ್ಮವೈವರ್ತಪುರಾಣ ಮತ್ತು ಗ
ಸಂಹಿತೆಗಳಲ್ಲಿ ಗಣೇಶನ ಸ್ತುತಿಪಾಠಗಳಿವೆ. ವಾರಾಹಪುರಾ
ದೇವಗಣಗಳು ಗಣೇಶನನ್ನು ಪ್ರಾರ್ಥಿಸಿರುವುದನ್ನು ನೋಡಬಹುದು

ನಮಸ್ತೇ ಗಜವಕ್ತ್ರಾಯ ನಮಸ್ತೇ ಗಣನಾಯಕ |
ವಿನಾಯಕ ನಮಸ್ತೇಽಸ್ತು ನಮಸ್ತೇ ಚಂಡವಿಕ್ರಮ ||
ನಮೋಽಸ್ತುತೇ ವಿಘ್ನಕರ್ತ್ರೇ ನಮಸ್ತೇ ಸರ್ಪಮೇಖಲ |
ನಮಸ್ತೇ ರುದ್ರವಕ್ತ್ರೋತ್ಥ ಪ್ರಲಂಬಜಠರಾಶ್ರಿತ ||
ಸರ್ವದೇವನಮಸ್ಕಾರಾದವಿಘ್ನಂ ಕುರು ಸರ್ವದಾ |

ಈರೀತಿಯಾದ ಪುರಾಣ ಪಾಠಗಳಲ್ಲದೆ ಯಜುರ್ವೇದದ
ಮೇಧಾಧ್ಯಾಯದ ಮಂತ್ರವನ್ನು ಗಣಪತಿಯ ಪೂಜಾಸಮಯ
ಹೇಳುತ್ತಾರೆ:—

ಗಣಾನಾಂ ತ್ವಾ ಗಣಪತಿಂ ಹವಾಮಹೆ ಪ್ರಿಯಾಣಾಂ
ಪ್ರಿಯಪತಿಂ ಹವಾಮಹೆ ನಿಧೀನಾಂ ತ್ವಾ ನಿಧಿಪತಿಂ ಹವಾಮ
ವ್ಯಸೋ ಮಮ | ಆಹಮಜಾನಿ ಗರ್ಭಧಮಾತ್ವಮಜಾಸಿ ಗ
ಧಮ್ |

ಈ ಮಂತ್ರದ ವ್ಯಾಖ್ಯಾನವನ್ನು ಹಿಂದಿನ ಅಧ್ಯಾಯದಲ್ಲಿ ಮಾಡಲಾಗಿದೆ. ಇದರ ಭಾಷ್ಯಕಾರ ಮತ್ತು ಶ್ರೌತಸೂತ್ರಕಾರನಾದ ಅಶ್ವದೈವತನು ಇದು ಅಶ್ವಮೇಧ ಪ್ರಕರಣವೆಂದು ಹೇಳಿದ್ದಾನೆ. 'ಗಣಪತಿ' ಈ ಒಂದು ಪದವನ್ನು ಬಿಟ್ಟರೆ ಬೇರೆ ಯಾವಪದವೂ ಗಣಪತಿಗೆ ಸಂಬಂಧಿಸಿಲ್ಲ. ಒಂದುಪಕ್ಷ ಗಣಪತಿಯ ಪರ ಎಂದು ಒಪ್ಪಿ ಕೊಂಡರೂ ಅದರ ಉತ್ತರಾರ್ಧ " ಆಹಮಜಾನಿ ಗರ್ಭಧಮಾತ್ವಮಜಾಸಿ ಗರ್ಭಧಮ್ " ಎಂಬುದು ನಿರರ್ಥಕವಾಗುವುದು. ಆದರೂ ಈ ಮಂತ್ರ ವನ್ನು ಮನೆಮನೆಗಳಲ್ಲಿ ಪೂಜಾಸಮಯದಲ್ಲಿ ಹೇಳುತ್ತಾರೆ. ಪ್ರಸ್ಥಾನ ಭೇದದಿಂದ ಬೇರೆ ಬೇರೆ ದೇವತೆಗಳನ್ನು ಅಧಿಕರಿಸಿರಬಹುದೆಂದು ಮೀಮಾಂಸಕರ ಅಭಿಪ್ರಾಯ. ನಾನೂ ಸಹ ಈ ಅಭಿಪ್ರಾಯವನ್ನೇ ಒಪ್ಪುತ್ತೇನೆ. ಆದರೂ ಯಾವುದೇ ಸಿದ್ಧಾಂತವಾಗಲಿ ಬುದ್ಧಿಪೂರ್ವಕವಾಗಿ ಪ್ರಯೋಗವಾಗಬೇಕು. ಶ್ರುತಿಯು ಸ್ಪಷ್ಟವಾಗಿ ಹೇಳಿದ್ದರೆ ತರ್ಕಕ್ಕೆ ಅವಕಾಶವಿರಲಿಲ್ಲ. ಆದರೆ ಗಣೇಶನ ವಿಚಾರದಲ್ಲಿ ಇದು ಅನ್ವಯವಾಗು ವುದಿಲ್ಲ. 'ಗಣಾನಾಂ ತ್ವಾ' ಮಂತ್ರವು ಗಣಪತಿಯ ಮಂತ್ರವೆಂದು ಶ್ರುತಿಯು ಹೇಳಿಲ್ಲ. ವೈದಿಕ ಯಜ್ಞಯಾಗಾದಿಗಳು ನಡೆಯುತ್ತಿದ್ದ ಸಮಯದ ಪ್ರಾಮಾಣಿಕ ಗ್ರಂಥವಾದ ಶ್ರೌತಸೂತ್ರವು ಎಲ್ಲಿಯೂ ಗಣಪತಿಯನ್ನು ಹೇಳಿಲ್ಲ. ಅರ್ವಾಚೀನ ಗ್ರಂಥಗಳಲ್ಲಿ ಗಣಪತಿಯ ಉಲ್ಲೇಖ ಸಿಕ್ಕುತ್ತದೆ. ಆದರೆ ಅವು ಪ್ರಾಮಾಣಿಕಗಳಾಗುವುದಿಲ್ಲ. ಒಂದು ಪಕ್ಷ ವೇದದ ಒಂದು ಮಂತ್ರವು ಏಸುಕ್ರಿಸ್ತನನ್ನು ಕುರಿತದ್ದಾಗಿದೆ ಎಂದರೆ ಅದರ ಸ್ಪಷ್ಟಉಲ್ಲೇಖವಿದೆಯೋ ಇಲ್ಲವೋ ಎಂಬ ಪ್ರಶ್ನೆ ಹುಟ್ಟುತ್ತದೆ. ಏಸುವಿನ ಪರ ಮಂತ್ರವಿಲ್ಲದಿದ್ದರೆ ಅದು ಏಸುವಿಗೆ ಸಂಬಂಧಿಸಿದುದಲ್ಲ. ಆದರೂ ಏಸುವಿಗೆ ಸಂಬಂಧಿಸಿದ ಯಾವುದಾದರು ಶಬ್ದವಿದೆಯೋ ಎಂಬ ಮರುಪ್ರಶ್ನೆ ಬರುತ್ತದೆ. ಇದಕ್ಕೂ ಸಂಬಂಧ ಸಿಕ್ಕದಿದ್ದರೆ ಸಂಪೂರ್ಣ ಏಸುವನ್ನು ಬಿಡುವುದು ನ್ಯಾಯವಾಗುತ್ತದೆ. ಹಾಗೆಯೇ 'ಗಣಾನಾಂ ತ್ವಾ' ಮಂತ್ರವು ಗಣೇಶನಿಗೆ ಸಂಬಂಧಿಸಿದ್ದಲ್ಲ.

ಗಣೇಶನ ಪೂಜೆಯಲ್ಲಿ ತಿಲ (ಎಳ್ಳು)ಕ್ಕೇ ಪ್ರಾಧಾನ್ಯತೆ
ಮಾಘಮಾಸದಲ್ಲಿಯ ಗಣೇಶ ಚತುರ್ಥಿಗೆ ತಿಲಚತುರ್ಥೀ
ಕರೆಯುತ್ತಾರೆ. ಅಂದಿನ ಪೂಜಾಮಾಹಾತ್ಮ್ಯವನ್ನು ಶಿವನೇ
ಖಂಡದಲ್ಲಿ ವರ್ಣಿಸುತ್ತಾನೆ:—

**ಮಾಘಶುಕ್ಲ ಚತುರ್ಥ್ಯಾಂ ತು ನಕ್ತವ್ರತಪರಾಯಣಃ।**
**ಯೇ ತ್ವಾಂ ಢುಂಢೇಽರ್ಚಯಿಷ್ಯಂತಿ ತೇಽರ್ಚ್ಯಾಃ ಸುರಸು**
**ದ್ರುಹಾಮ**

ಹೇ ಢುಂಢಿ! ಮಾಘಚತುರ್ಥಿಯ ರಾತ್ರಿ ವ್ರತ ಪಾರಾ
ಮಾಡಿ ಯಾರು ನಿನ್ನನ್ನು ಆರಾಧಿಸುವವರೋ ಅವರನ್ನು ದೇವಗಣ
ಪೂಜಿಸುತ್ತಾರೆ.

ಪಂಚದೇವೋಪಾಸಕರಾದ ಹಿಂದುಗಳು ಯಾವಾಗಲಾದರೂ
ಗಣೇಶನನ್ನು ಪೂಜಿಸುತ್ತಾರೆ. ಆದರೆ ನೂರಾರು ವರ್ಷಗಳ
ಗಣೇಶೋಪಾಸಕರ ಒಂದು ಸಂಪ್ರದಾಯವೇ ಇದ್ದಿತು. ಇವ
ಗಣಾಪತ್ಯರೆಂದು ಕರೆಯುತ್ತಿದ್ದರು. ಶ್ರುತಿಗೆ ಅನುಸಾರವಾಗಿ ಬ್ರಾ
ರಿಗೆ ಅಗ್ನಿ, ವಿಷ್ಣು, ಸವಿತಾ, ಬೃಹಸ್ಪತಿ ಮತ್ತು ಸರಸ್ವತಿ ಎಂಬ
ಜನ ದೇವತೆಗಳಿದ್ದಾರೆ. ಇಲ್ಲಿ ಬಂದಿರುವ ಬೃಹಸ್ಪತಿ ಶಬ್ದವು ಗಣಪ
ಎಂದು ಗಾಣಾಪತ್ಯರ ವಾದ. ಈ ಸಂಪ್ರದಾಯವು ಶಂಕರಾಚಾರ್ಯ
ಸುಮಾರು ೧೨೦೦—೧೩೦೦ ವರ್ಷಗಳು ಪ್ರಾಚೀನವೆಂದು ಪ್ರಾಮಾ
ವಾಗಿ ಹೇಳಬಹುದು. ಶಂಕರಾಚಾರ್ಯರ ದಿಗ್ವಿಜಯದಲ್ಲಿ ಆಚಾರ್ಯ
ಗಾಣಾಪತ್ಯರೊಡನೆ ಶಾಸ್ತ್ರಾರ್ಥಮಾಡಿರುವ ಉಲ್ಲೇಖವಿದೆ. ಈಗ
ಸಂಪ್ರದಾಯವು ಲೋಪವಾಗಿದೆ. ಆ ಸಂಪ್ರದಾಯದವರು ಗಣೇ
ಈ ಚರಾಚರಜಗತ್ತಿಗೆ ಉಪಾದಾನ ಮತ್ತು ನಿಮಿತ್ತ ಕಾರಣ
ನಂಬಿದ್ದರು. ಭೋಗ ಮತ್ತು ಮೋಕ್ಷಪ್ರಾಪ್ತಿಗಾಗಿ ಅವನ ಉಪಾಸನೆ

ಮುಖ್ಯವಾದದ್ದೆಂದು ಅವರ ನಂಬಿಕೆ. ಈ ಅಭಿಪ್ರಾಯವನ್ನು ಗಾಣಾಪತ್ಯುಪನಿಷತ್ತು ಪುಷ್ಟೀಕರಿಸುತ್ತದೆ:—

ತ್ವಮೇವ ಕೇವಲಂ ಕರ್ತಾಸಿ । ತ್ವಮೇವ ಕೇವಲಂ ಧರ್ತಾಸಿ । ತ್ವಮೇವ ಕೇವಲಂ ಹರ್ತಾಸಿ । ತ್ವಮೇವ ಕೇವಲಂ ಸರ್ವಂ ಖಲ್ವಿದಂ ಬ್ರಹ್ಮಾಸಿ । ತ್ವಂ ಸಾಕ್ಷಾದಾತ್ಮಾಸಿ ನಿತ್ಯಂ। ಸರ್ವಂ ಜಗದಿದಂ ತ್ವತ್ತೋ ಜಾಯತೆ । ಸರ್ವಂ ಜಗದಿದಂ ತ್ವತ್ತಸ್ತಿಷ್ಠತಿ । ಸರ್ವಂ ಜಗದಿದಂ ತ್ವಯಿ ಲಯಮೇಷ್ಯತಿ । ತ್ವಂ ಬ್ರಹ್ಮಾ ತ್ವಂ ವಿಷ್ಣುಸ್ತ್ವಂ ರುದ್ರ ಸ್ತ್ವಮಿಂದ್ರಸ್ತ್ವಮಗ್ನಿಸ್ತ್ವಂ ವಾಯುಸ್ತ್ವಂ ಸೂರ್ಯಸ್ತ್ವಂ ಚಂದ್ರಮಾಸ್ತ್ವಂ ಬ್ರಹ್ಮಾ ಭೂರ್ಭುವಃ ಸುವರೋಮ್ ।

ನೀನೇ ಸೃಷ್ಟಿಕರ್ತ, ನೀನೇ ಕಾಪಾಡುವವನು, ನೀನೇ ಸಂಹಾರಕನು, ನೀನು ಈ ಸಮಸ್ತಜಗತ್ತಿನಿಂದ ಅಭಿನ್ನವಾದ ಬ್ರಹ್ಮವಾಗಿದ್ದೀಯೆ. ನೀನೇ ಸಾಕ್ಷಾತ್ ಆತ್ಮ. ಬ್ರಹ್ಮ, ವಿಷ್ಣು, ರುದ್ರ, ಇಂದ್ರ, ಅಗ್ನಿ, ವಾಯು, ಸೂರ್ಯ, ಚಂದ್ರ ಮತ್ತು ಎಲ್ಲಾ ಲೋಕಗಳು ನೀನೇ ಆಗಿದ್ದೀಯೆ. ಓಂಕಾರ ಸ್ವರೂಪನೇ ಗಣಪತಿ ಎಂದು ವರ್ಣಿತನಾಗಿದ್ದಾನೆ. ಗಣೇಶೋಪಾಸಕರು ಈ ಗಣೇಶ ಗಾಯತ್ರಿಯನ್ನು ಜಪಿಸುತ್ತಾರೆ:—

ಓಂ ಗಂ ಏಕದಂತಾಯ ವಿದ್ಮಹೆ ವಕ್ರತುಂಡಾಯ ಧೀಮಹಿ ತನ್ನೋ ದಂತೀ ಪ್ರಚೋದಯಾತ್ ।

ಇದಲ್ಲದೆ ಇನ್ನೂ ಅನೇಕ ಮಂತ್ರಗಳಿವೆ:—

ನಮೋ ವ್ರಾತಪತಯೆ ನಮೋ ಗಣಪತಯೆ ನಮಃ ಪ್ರಮಥಪತಯೆ ನಮಸ್ತೇಽಸ್ತು ಲಂಬೋದರಾಯೈಕದಂತಾಯ ವಿಘ್ನವಿನಾಶಿನೇ ಶಿವಸುತಾಯ ಶ್ರೀವರದಮೂರ್ತಯೆ ನಮೋ ನಮಃ ।

ಗಾಣಾಪತ್ಯರಲ್ಲಿ ಆರು ಭೇದಗಳಿದ್ದುದು ಕಂಡುಬರುತ್ತ
ಇವರು ತಮ್ಮ ಉಪಾಸ್ಯ ದೇವತೆಯನ್ನು ಮಹಾಗಣಾಧಿಪತಿ, ಕು
ಗಣಪತಿ, ಹೇರಂಬಸುತ, ನವನೀತ ಮತ್ತು ಸಂತಾನ ಎಂಬ ಹೆ
ಗಳಿಂದ ಕರೆಯುತ್ತಿದ್ದರು. ಅವುಗಳ ವರ್ಣನೆ ಇಲ್ಲಿ ಅನಾವ
ಗಾಣಾಪತ್ಯ ಸಂಪ್ರದಾಯವು ಈಗ ನಾಶವಾಗಿದ್ದರೂ ಗಣಪತಿಯ
ಆಸೇತುಹಿಮಾಚಲದವರೆವಿಗೂ ನಡೆಯುತ್ತಲಿದೆ. ಮಹಾರಾಷ್ಟ್ರ
ಗಣಗತಿಯ ಪೂಜೆ ವಿಶೇಷವಾಗಿ ಆಚರಿಸಲ್ಪಡುತ್ತಿದೆ.

ಪುರಾಣ ಮತ್ತು ಗಾಣಾಪತ್ಯ ವಾಙ್ಮಯದಲ್ಲಿ ಗಣಪತಿಯ ಅ
ವರ್ಣನೆಗಳಿವೆ. ಅವುಗಳಿಗನುಸಾರವಾಗಿಯೇ ಮೂರ್ತಿಗಳು ಮಾಡಲ್ಪ
ತ್ತಿವೆ. ಎಲ್ಲಾ ವರ್ಣನೆಗಳನ್ನು ಇಲ್ಲಿ ಹೇಳುವುದಾದರೆ ಅದೇ ಒ
ಉದ್ಗ್ರಂಥವಾಗುತ್ತದೆ. ಅದಕ್ಕಾಗಿಯೇ ಇಲ್ಲಿ ಕೆಲವು ಉದಾಹ
ಗಳನ್ನು ಮಾತ್ರ ಕೊಡಲಾಗಿದೆ. ಇನ್ನು ಕೆಲವನ್ನು ೭ ನೇ ಅಧ್ಯಾಯ
ಹೇಳುತ್ತೇವೆ. ಮೊದಲನೆಯದಾಗಿ :—

ಚತುರ್ಭುಜಸ್ತ್ರಿನೇತ್ರಶ್ಚ ಕರ್ತವ್ಯೋऽತ್ರ ಗಜಾನನಃ ।
ನಾಗಯಜ್ಞೋಪವೀತಶ್ಚ ಶಶಾಂಕಕೃತ ಶೇಖರಃ ॥
ದಕ್ಷೇ ದಂತಂ ಕರೆ ದದ್ಯಾತ್ ದ್ವಿತೀಯೆ ಚಾಕ್ಷಸೂತ್ರಕಮ್ ।
ತೃತೀಯೇ ಪರಶುಂ ದದ್ಯಾತ್ ಚತುರ್ಥೇ ಮೋದಕಂ ತಥಾ ।

ಗಣಪತಿಯ ಮೂರ್ತಿಯು ತ್ರಿನೇತ್ರ ಮತ್ತು ಚತುರ್ಭುಜ
ದ್ದಾಗಿರಬೇಕು. ಶಿರಸ್ಸಿನಲ್ಲಿ ಚಂದ್ರನಿರಬೇಕು. ಸರ್ಪವೇ ಜನಿ
ವಾಗಿರಬೇಕು. ಬಲದ ಕೈಗಳಲ್ಲಿ ದಂತ ಹಾಗು ರುದ್ರಾಕ್ಷಮಾಲೆ ಎ
ಕೈಗಳಲ್ಲಿ ಕೊಡಲಿ ಹಾಗು ಮೋದಕ (ಕಡಬು) ಇರಬೇಕು.

ಗಂಡಪಾಣಿ ಗಲದ್ದಾನ ಪೂರಲಾಲಸಮಾನಸಾನ್ ।
ದ್ವಿರೇಫಾನ್ ಕರ್ಣತಾಲಾಭ್ಯಾಂ ವಾರಯಂತಂ ಮುಹು
ರ್ಮುಹುಃ

ಕರಾಗ್ರಧೃತಮಾಣಿಕ್ಯ ಕುಂಭವಕ್ತ್ರ ವಿನಿಃಸೃತೈಃ ।
ರತ್ನವರ್ಷೈಃ ಪ್ರೀಣಯಂತಂ ಸಾಧಕಂ ಮದವಿಹ್ವಲಮ್ ॥
ಮಾಣಿಕ್ಯ ಮುಕುಟೋಪೇತಂ ರತ್ನಾಭರಣ ಭೂಷಿತಮ್ ।

ಗಂಡಸ್ಥಲದಿಂದ ಹರಿಯುತ್ತಿರುವ ಮದಕ್ಕೆ ಭ್ರಮರಗಳು ಮುತ್ತಿಕೊಂಡಿವೆ. ಅವುಗಳನ್ನು ತನ್ನ ಕಿವಿಗಳಿಂದ ಓಡಿಸುತ್ತಿದ್ದಾನೆ. ಮಾದಕತೆಯಿಂದ ಮತ್ತನಾಗಿದ್ದಾನೆ, ಮಣಿಮುಕುಟ ರಾರಾಜಿಸುತ್ತಿದೆ. ರತ್ನಾಭರಣಗಳಿಂದ ಅಲಂಕೃತನಾಗಿದ್ದಾನೆ. ತನ್ನ ಸಾಧಕರಿಗೆ ರತ್ನದ ಮಳೆಯನ್ನೇ ಸುರಿಸಿ ಸಂತುಷ್ಟರನ್ನಾಗಿ ಮಾಡಿದ್ದಾನೆ.

ಈರೀತಿ ವರ್ಣನೆಗಳಿರುವುದು ಕಂಡುಬರುತ್ತದೆ. ಇದೇ ವಿಚಾರವನ್ನು ೭ನೇ ಅಧ್ಯಾಯದಲ್ಲಿ ಸ್ವಲ್ಪ ವಿಶದವಾಗಿ ಹೇಳುತ್ತೇನೆ. ಅಲ್ಲಿ ತಂತ್ರೋಕ್ತ ಗಣೇಶನ ಪೂಜೆಯು ವಿಸ್ತಾರವಾಗಿ ಹೇಳಲ್ಪಟ್ಟಿದೆ. ಆದರಲ್ಲಿ ಆಧ್ಯಾತ್ಮಿಕ ಮಹತ್ವವನ್ನು ಕಾಣಬಹುದು. ಗಣೇಶನ ಸ್ವರೂಪ ದರ್ಶನವನ್ನು ತಂತ್ರಗಳಲ್ಲಿ ಸುಲಭವಾಗಿ ನೋಡಬಹುದು. ಪುರಾಣಗಳ ವರ್ಣನೆಗಳು ತಂತ್ರಗಳ ಛಾಯೆಯಂತಿವೆ. ಕೆಲವು ವರ್ಣನೆಗಳಲ್ಲಿ ಪದ್ಮಹಸ್ತದೇವಿಯರೊಡನೆ ಗಣೇಶನನ್ನು ಕಾಣುತ್ತೇವೆ. ಕೆಲವು ಕಡೆ ಆ ದೇವಿಯನ್ನು ಶ್ಯಾಮಲಾಂಗೀ ಎಂದು ಕರೆಯಲಾಗಿದೆ. ಆ ದೇವಿಯ ಹೆಸರು ಜಯಂತೀ. ಅವಳು ಗಣೇಶನ ಶಕ್ತಿಯ ಪ್ರತೀಕವೆಂದು ತಿಳಿಯಬಹುದು. ಅಣಿಮಾದಿ ಅಷ್ಟಸಿದ್ಧಿಗಳ ಸಮುಚ್ಚಯವೇ ಆ ದೇವಿ ಎಂದು ಕೆಲವರ ಅಭಿಪ್ರಾಯ. ಇನ್ನು ಕೆಲವರು ಸಪ್ತಮಾತೃಕೆಯರ ಅಂದರೆ ಬ್ರಾಹ್ಮಣೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ ಮತ್ತು ಚಾಮುಂಡಿಯರ ಜೊತೆಯಲ್ಲಿ ಯೋಗೇಶ್ವರಿಯನ್ನೂ ಸಹ ಸೇರಿಸಿ ಈ ಸಮೂಹವನ್ನು ದೇವೀರೂಪದಲ್ಲಿ ತೋರಿಸಲಾಗಿದೆಯೆಂದು ಅಭಿಪ್ರಾಯಪಡುತ್ತಾರೆ.

ಗಣೇಶನ ವರ್ಣನೆಯನ್ನು ಮಾಡುವಾಗ ಅವನ ವಾಹನವಾದ

ಇಲಿಯನ್ನು ಮರೆಯುವುದು ಸಾಧ್ಯವಿಲ್ಲ. ಗಣಪತಿಯನ್ನು ಮೂಷ ವಾಹನ ಮತ್ತು ಆಖುರಥನೆಂದು ಹೇಳಿದೆ. ವಿಷ್ಣುವು ಗರುಡಧ್ವ ವುಳ್ಳವನು. ಶಿವನು ವೃಷಭಧ್ವಜ ಧಾರಿಯು. ಹಾಗೆಯೇ ಗಣೇಶ ಮೂಷಕಧ್ವಜವುಳ್ಳವನಾಗಿದ್ದಾನೆ. ಗಣೇಶನ ವಾಹನದ ವಿಚಾರ ಈ ಒಂದು ಕಥೆಯನ್ನು ನೋಡಬಹುದು :—

ಗಣೇಶನು ಒಂದುಸಾರಿ ಗಜಮುಖ ರಾಕ್ಷಸನೊಡನೆ ಯು ಮಾಡಿದನು. ರಾಕ್ಷಸನು ಗಣೇಶನ ಬಲಗಡೆಯ ದಂತವನ್ನು ಮುರಿದ ಗಣೇಶನು ಮುರಿದ ಕೋರೆಯಿಂದಲೇ ದೈತ್ಯನ ಮೇಲೆ ಎರಗಿದ ಆಘಾತವನ್ನು ತಡೆಯಲಾರದೆ ರಾಕ್ಷಸನು ಇಲಿಯ ರೂಪಿಯಾಗಿ ತೊಡಗಿದನು. ಆದರೂ ಗಣೇಶನು ಅವನನ್ನು ಹಿಡಿದುಕೊಂ ಬಂದನು. ಅಂದಿನಿಂದ ಆ ಇಲಿಯು ಅವನ ವಾಹನವಾಯಿ ಇದಲ್ಲದೆ ಬೇರೆ ಬೇರೆ ವಾಹನಗಳೂ ಅವನಿಗೆ ಇವೆ. ಕೆಲವು ಕಡೆ ಸಿ ವಾಹನವಾಗಿರುವ ಮೂರ್ತಿಗಳು ಸಿಕ್ಕಿವೆ. ಇಲಿಯ ವಿಚಾರ ಯಜುರ್ವೇದದ ಮೂರನೇ ಅಧ್ಯಾಯದ ಐವತ್ತೇಳನೇ ಮಂತ್ರದಲ್ಲಿ:-

**ಏಷತೇ ರುದ್ರಭಾಗಃ ಸಹ ಸ್ವಸ್ರಾಂಬಿಕಯಾ ತಂ ಜುಷ ಸ್ವಾಹೈಷತೆ ರುದ್ರಭಾಗ ಆಖುಸ್ತೇ ಪಶುಃ ।**

ಎಲೈ ರುದ್ರ! ಇದು ನಿನ್ನ ಭಾಗ. ನಿನ್ನ ಸಹೋದರಿ ಅಂ ಯೊಡನೆ ಇದನ್ನು ಸ್ವೀಕರಿಸು. ಇಲಿಯು ನಿನ್ನ ಪಶುವಾಗಿದೆ ಎಂದಿ ರುದ್ರನಿಗಾಗಿ ಪುರೋಡಾಶ ಇಲಿಯನ್ನು ಅಗೆದ ಮಣ್ಣಿನಲ್ಲಿ ಹಾಕುತ್ತಾ ರುದ್ರನು ಕ್ರೂರದೇವತೆ. ಅವನ ಸಹೋದರಿ ಅಂಬಿಕೆಯೂ ಕ್ರೂ ಸ್ವಭಾವದವಳೇ. ಅವಳು ಜನಗಳಿಗೆ ಮುಪ್ಪುಬರುವಂತೆ ಮಾ ಅವರನ್ನು ಕೊಲ್ಲುತ್ತಾಳೆ. ಇಲ್ಲಿ ಇಲಿಯನ್ನು ರುದ್ರನ ಪಶುವೆಂದ ಹೇಳಿದೆ. ವೈದಿಕ ವಾಙ್ಮಯದ ಪರಿಚಯವುಳ್ಳವರು ಅಂಬಿಕೆಯನ್ನ ಚೆನ್ನಾಗಿ ಅರ್ಥಮಾಡಿಕೊಂಡಿದ್ದಾರೆ. ಪುರಾಣಗಳಲ್ಲಿ ಅಂಬಿಕೆಯನ್ನ

ರುದ್ರನ ಪತ್ನಿಯೆಂದು ಹೇಳಿದೆ. ಆದರೆ ವೇದದಲ್ಲಿ ಅವನ ಸಹೋದರಿಯೆಂದು ಉಲ್ಲೇಖವಿದೆ.

ಐಹಿಕ ಮತ್ತು ಆಮುಷ್ಮಿಕ ಕಾಮ್ಯ ಕರ್ಮಗಳ ಪ್ರಾರಂಭದಲ್ಲಿ ಗಣೇಶನನ್ನು ಪೂಜಿಸುತ್ತಾರೆ. ಬಹುಶೀಕವಾಗಿ ಶೌತಕರ್ಮಗಳಲ್ಲಿಯೂ ಗಣೇಶನ ಪೂಜೆ ಪ್ರಧಾನವಾಗಿರುತ್ತದೆ. ಇವನ ಆರಾಧನೆಯಿಂದ ವಿಘ್ನಗಳು ನಾಶವಾಗಿ ಸಿದ್ಧಿಗಳುಂಟಾಗುವುವೆಂಬ ನಂಬಿಕೆ ಬಹಳವಾಗಿದೆ. ಗಣೇಶನ ಎರಡು ಪಕ್ಕಗಳಲ್ಲಿ ಋದ್ಧಿ ಮತ್ತು ಸಿದ್ಧಿ ಎಂಬ ಸ್ತ್ರೀಯರು ಚಾಮರ ಹಿಡಿದು ನಿಂತಿರುತ್ತಾರೆ. ಇವರಿಬ್ಬರೂ ಗಣೇಶನ ಪತ್ನಿಯರು. ಉತ್ತರ ಭಾರತದಲ್ಲಿ ಮಂಗಳಕಾರ್ಯಗಳಲ್ಲಿ ಮನೆಗಳ ಗೋಡೆಗಳ ಮೇಲೆ ಗಣಪತಿಯ ಮೂರ್ತ ಸ್ವರೂಪವನ್ನು ಚಿತ್ರಿಸುತ್ತಾರೆ. ಇಂಥ ಚಿತ್ರಗಳನ್ನು ಪುಸ್ತಕಗಳಲ್ಲಿ ಹಾಗು ಆಹ್ವಾನ ಪತ್ರಿಕೆಗಳಲ್ಲಿ ಮುದ್ರಿಸುತ್ತಿರುವುದನ್ನು ಭಾರತದ ಎಲ್ಲಾ ಕಡೆಗಳಲ್ಲಿಯೂ ನೋಡುತ್ತಿದ್ದೇವೆ.

ಗಣೇಶನನ್ನು ವಿದ್ಯಾದಾತನೆಂದು ಹೇಳುತ್ತಾರೆ. ವಿದ್ಯಾರ್ಥಿಗಳು ಬಹಳವಾಗಿ ವಿದ್ಯಾಧಿದೇವತೆಯೆಂದು ಪೂಜಿಸುತ್ತಾರೆ. ಪರೀಕ್ಷೆ ದಿನಗಳಲ್ಲಿ ಕಾಶಿಯ ಗಣೇಶ ಮಂದಿರದಲ್ಲಿ ವಿದ್ಯಾರ್ಥಿಗಳ ಶ್ರದ್ಧೆಯನ್ನು ನೋಡಬಹುದು. ಪರೀಕ್ಷೆಯಲ್ಲಿ ಉತ್ತೀರ್ಣರಾದವರು ಗಣಪತಿಯ ಮಂದಿರದಲ್ಲಿ ಸಿಹಿ ಹಂಚುವುದನ್ನು ನೋಡಬಹುದು. ಆದರೆ ಗಣಪತಿಯು ವಿದ್ಯಾದಾತನಾದುದು ಹೇಗೆ? ಇದಕ್ಕೆ ಎಲ್ಲಿಯೂ ಆಧಾರವಿಲ್ಲ. ಕೆಲವು ಚಿತ್ರಗಳಲ್ಲಿ ಒಂದು ಕೈಯಲ್ಲಿ ಲೇಖನಿ ಮತ್ತೊಂದರಲ್ಲಿ ಪುಸ್ತಕವಿರುವುದನ್ನು ನೋಡಬಹುದು. ಗಣೇಶನು ಮುರಿದ ತನ್ನ ದಂತವನ್ನೇ ಲೇಖನಿಯನ್ನಾಗಿ ಮಾಡಿಕೊಂಡನೆಂದು ಹೇಳುತ್ತಾರೆ. ಗಣಪತಿ ವಿದ್ಯಾದಾತನಾದುದು ಕೇವಲ ಭ್ರಾಂತಿಯೆಂದು ಒಬ್ಬ ವಿದ್ವಾಂಸರ ಅಭಿಪ್ರಾಯ. ಆದರೆ ಅವನು ಸಿದ್ಧಿದಾತನೆಂದು ಎಲ್ಲಾ ಪುರಾಣಗಳು ಹೇಳುತ್ತಿವೆ. ಹಿಂದಿನ ಕಾಲದಲ್ಲಿ ವರ್ಣಮಾಲೆಯನ್ನು "ಸಿದ್ಧಂ" ಎಂದು ಕರೆಯುತ್ತಿದ್ದರು.

ಸಿದ್ಧಂ ಎಂದು ಹೇಳಿಕೊಂಡು ಅಕ್ಷರಾಭ್ಯಾಸ ಪ್ರಾರಂಭವಾಗುತ್ತಿತ್ತು. ಪ್ರಾಚೀನ ಪರಿಪಾಠವಿರುವ ಶಾಲೆಗಳಲ್ಲಿ ಅಕ್ಷರಾಭ್ಯಾಸದ ಪ್ರಾರಂಭದಲ್ಲಿ "ಓನಾಮಾಸೀದಂಗ" ಎಂದು ಹೇಳಿಸುತ್ತಿದ್ದರು. ಓನಾಮ ಎಂಬುದು ಸಿದ್ಧಂ ಎಂಬುದರ ವಿಕೃತರೂಪ. ಕಾಲಾಂತರದಲ್ಲಿ ಸಿದ್ಧಿದಾತನಾದ ಗಣೇಶನೇ ವಿದ್ಯೆಯನ್ನು ಅನುಗ್ರಹಿಸುವನೆಂದು ನಂಬಿದರು.

ಸಾಮಾನ್ಯವಾಗಿ ಕೆಲವು ಹಿಂದುಗಳು ಪಂಚಾಯತನರಿದ್ದಾರೆ. ಅವರು ವಿಷ್ಣು, ಶಿವ, ಶಕ್ತಿ, ಗಣೇಶ ಮತ್ತು ಸೂರ್ಯನ ಉಪಾಸನೆಯನ್ನು ಮಾಡುತ್ತಾರೆ. ಅವರು ಮಧ್ಯದಲ್ಲಿ ತಮ್ಮ ಇಷ್ಟದೇವತೆಯನ್ನು ನಾಲ್ಕುಮೂಲೆಗಳಲ್ಲಿ ಉಳಿದ ನಾಲ್ಕು ದೇವತೆಗಳನ್ನು ಸ್ಥಾಪಿಸಿ ಪೂಜಿಸಬೇಕು* :—

ಶಕ್ತಿ ವಿಷ್ಣು

ಗಣೇಶ

ಸೂರ್ಯ ಶಿವ

ಉಪಾಸನೆಗಾಗಿ ಈ ಪ್ರಾರ್ಥನೆಯನ್ನು ಕೊಡಲಾಗಿದೆ :—

ಶ್ವೇತಾಂಗಂ ಶ್ವೇತವಸ್ತ್ರಂ ಸಿತಕುಸುಮಗಣೈಃ ಪೂಜಿತಂ
ಶ್ವೇತಗಂಧೈಃ
ಕ್ಷೀರಾಬ್ಧೌ ರತ್ನದೀಪೈಃ ಸುರವರತಿಲಕಂ ರತ್ನಸಿಂಹಾಸನಸ್ಥಂ।
ದೋರ್ಭಿಃ ಪಾಶಾಂಕುಶಾಬ್ಜಾಭಯಧರಮನಿಶಂ
ಚಂದ್ರಮೌಲಿಂ ತ್ರಿನೇತ್ರಮ್।
ಧ್ಯಾಯೇಚ್ಛಾಂತ್ಯರ್ಥಮೀಶಂ ಗಣಪತಿಮಮಲಂ ಶ್ರೀಸಮೇತಂ
ಪ್ರಸನ್ನಮ್॥

* ಈ ವಿಷಯವು ಕಲ್ಯಾಣದ ಸಾಧನಾಂಕದಿಂದ ಉದ್ಧರಿಸಲಾಗಿದೆ.

ಶ್ವೇತಾಂಗ, ಶ್ವೇತವಸ್ತ್ರಧಾರಿ, ಶ್ವೇತಪುಷ್ಪಗಳಿಂದ ಪೂಜಿಸಲ್ಪಟ್ಟ ದೇವತೆಗಳಲ್ಲಿ ಶ್ರೇಷ್ಠನಾದ, ಕ್ಷೀರಸಾಗರದ ರತ್ನಸಿಂಹಾಸನದಲ್ಲಿ ಕುಳಿತಿರುವ, ಚಂದ್ರನನ್ನು ಧರಿಸಿರುವ, ಮುಕ್ಕಣ್ಣನಾದ, ಪ್ರಸನ್ನನಾದ ಮಲರಹಿತನಾದ ಮತ್ತು ಶ್ರೀಸಮೇತನಾದ ಕೈಗಳಲ್ಲಿ ಪಾಶ, ಅಂಕುಶ ಕಮಲ ಹಾಗು ಅಭಯ ಮುದ್ರೆಯುಳ್ಳ ಸ್ವಾಮಿಯಾದ ಗಣಪತಿಯನ್ನು ತೃಪ್ತಿಪಡಿಸಲು ಪೂಜಿಸಬೇಕು. ಇದರಲ್ಲಿ ಈ ಜಪಮಂತ್ರವನ್ನು ಸಹ ಹೇಳಿದೆ:—

**ನಮೋ ಗಣೇಭ್ಯೋ ಗಣಪತಿಭ್ಯಶ್ಚ ವೋ ನಮೋ ನಮೋ ವ್ರಾತೇಭ್ಯೋ ವ್ರಾತಪತಿಭ್ಯಶ್ಚ ವೋ ನಮೋ ನಮೋ ಗೃತ್ಸೇಭ್ಯೋ ಗೃತ್ಸಪತಿಭ್ಯಶ್ಚ ವೋ ನಮೋ ನಮೋ ವಿರೂಪೇಭ್ಯೋ ವಿಶ್ವರೂಪೇಭ್ಯಶ್ಚ ವೋ ನಮಃ।**

ಇದು ಯಜುರ್ವೇದದ ೧೬ ನೇ ಅಧ್ಯಾಯದ ೨೫ ನೇ ಮಂತ್ರ.



# ಅಧ್ಯಾಯ ೫

## ಗಣೇಶನ ಕೆಲವು ಸ್ಮರಣೀಯ ಕಾರ್ಯಗಳು

ಸಿದ್ಧಿದಾತ ಮತ್ತು ವಿಘ್ನೇಶ್ವರನಾದುದರಿಂದ ಗಣೇಶನ ಮತ್ತು ಅವನ ಭಕ್ತರ ಸಂಬಂಧ ನಿತ್ಯನೂತನವಾಗಿದೆ. ಅವನು ಅನಿಷ್ಟಗಳನ್ನು ಹೋಗಲಾಡಿಸಿ ಇಷ್ಟಗಳನ್ನು ಅನುಗ್ರಹಿಸುತ್ತಾನೆ. ಇಂಥ ಸ್ಮರಣೀಯ ಅನೇಕ ಕಾರ್ಯಗಳನ್ನು ಮಾಡಿರುತ್ತಾನೆ. ಅವನ ಕೆಲವು ಕಾರ್ಯಗಳು ಬಹಳ ಪ್ರಸಿದ್ಧಿಹೊಂದಿವೆ. ಅಂಥಹ ಸ್ಮರಣೀಯ ಕಾರ್ಯಗಳಲ್ಲಿ ಕೆಲವಕ್ಕೆ ಜನಗಳ ಅಭಿಪ್ರಾಯದ ಛಾಯೆ ಇದೆ. ಮತ್ತೆ ಕೆಲವು ಜನಗಳ ವಿನೋದ ಕಲ್ಪನೆಗಳಾಗಿವೆ. ಉತ್ತರ ಭಾರತದಲ್ಲಿ ಒಂದು ಕಥೆ ಇದೆ. ಸಮಯ ಹಾಗು ಸ್ಥಳಭೇದದಿಂದ ಕಥೆಯಲ್ಲಿ ವ್ಯತ್ಯಾಸಗಳಾಗಿವೆ. ಆದರೂ ಮೂಲ ಕಥೆ ಒಂದೆ.

೧) ಒಂದುಸಾರಿ ಒಬ್ಬ ದರಿದ್ರಳಾದ ಸ್ತ್ರೀಯು ಶ್ರದ್ಧೆಯಿಂದ ಗಣಪತಿಯನ್ನು ಪೂಜಿಸುತ್ತಿದ್ದಳು. ಅವಳು ಗಣೇಶ ಚತುರ್ಥಿಯ ದಿನ ಭಿಕ್ಷೆಯಿಂದ ಎಳ್ಳನ್ನು ತಂದು, ಮೋದಕಗಳನ್ನು ಮಾಡಿ ಗಣೇಶನಿಗೆ ಎಲ್ಲ ವನ್ನೂ ಅರ್ಪಿಸಿ, ತಾನು ಉಪವಾಸದಿಂದ ಮಲಗಿದಳು. ಗಣೇಶನು ಅವಳ ಭಕ್ತಿಗೆ ಮೆಚ್ಚಿ ದರ್ಶನವಿತ್ತನು. ಸ್ವಲ್ಪಸಮಯದ ಅನಂತರ ಗಣಪತಿಯು ಭಕ್ತಳೆ! ನಿನ್ನ ಮೋದಕಗಳನ್ನು ತಿಂದು ನನ್ನ ಹೊಟ್ಟೆ ಹೊಡೆದು ಹೋಗುವಂತಾಗಿದೆ. ನಾನು ಶೌಚಕ್ಕೆ ಹೋಗಬೇಕು ಸ್ಥಳವನ್ನು ತೋರಿಸೆಂದನು. ಆಗ ಆ ಸ್ತ್ರೀಯು ಭಗವಂತನೆ! ಶೌಚಕ್ಕಾಗಿ ಇಲ್ಲಿ ಬೇರೆ ಸ್ಥಳವಿಲ್ಲ. ನನ್ನ ಶರೀರವನ್ನೇ ಪವಿತ್ರ ಮಾಡೆಂದು ಪ್ರಾರ್ಥಿಸಿದಳು. ಬೆಳಿಗ್ಗೆ ನೋಡಲಾಗಿ ಅವಳ ಕಣ್ಣನ್ನು ಅವಳೇ ನಂಬಲಾಗಲಿಲ್ಲ. ಅವಳ ಗುಡಿಸಲು ಧನಕನಕಾದಿ ವಸ್ತುಗಳಿಂದ ತುಂಬಿದ ದಿವ್ಯ ಭವನವಾಗಿದ್ದಿತು. ಅಂತ್ಯದಲ್ಲಿ ಗಣೇಶನು ಅವಳಿಗೆ ಮುಕ್ತಿಯನ್ನು ಅನುಗ್ರಹಿಸಿ

ದನು. ಇವಳ ಪಕ್ಕದ ಮನೆಯ ಸ್ತ್ರೀಯೊಬ್ಬಳು ಇವಳ ಐಶ್ವರ್ಯವನ್ನು ನೋಡಿ ಅಸೂಯೆ ಪಡುತ್ತಿದ್ದಳು. ಅವಳು ಶ್ರೀಮಂತಳೂ, ಜಿಪುಣೆಯೂ, ಸ್ವಭಾವತಃ ಕ್ರೂರಿಯೂ ಆಗಿದ್ದಳು. ಅವಳೂ ಸಹ ಗಣೇಶ ಚತುರ್ಥಿಯ ವ್ರತವನ್ನಾಚರಿಸಿದಳು. ಅದೇ ರಾತ್ರಿ ಗಣೇಶನು ಅವಳಿಗೂ ಒಬ್ಬ ಬೊಜ್ಜುಬೆಳೆದ ಮನುಷ್ಯನ ರೂಪದಲ್ಲಿ ಕಾಣಿಸಿಕೊಂಡನು. ನೈವೇದ್ಯ ಕ್ಕಿಟ್ಟಿದ್ದ ತಿನಿಸುಗಳನ್ನು ತಿಂದನು. ಅನಂತರ ಶೌಚಕ್ಕಾಗಿ ಸ್ಥಳವನ್ನು ಕೇಳಿದನು. ಅವಳು ಈ ಮನೆಯು ತಮ್ಮದೇ ಇದನ್ನೆ ಪವಿತ್ರಗೊಳಿಸಿ ಎಂದು ಹೇಳಿದಳು. ಬೆಳಿಗ್ಗೆ ನೋಡಲಾಗಿ ಆ ಮನೆಯೆಲ್ಲಾ ಹೇಸಿಗೆ ಯಿಂದ ತುಂಬಿದ್ದಿತು. ಈ ಕಥೆಯಲ್ಲಿ ಜಿಗುಪ್ಸೆಯನ್ನುಂಟುಮಾಡುವ ಅಲ್ಪ ಅಶ್ಲೀಲತೆ ಕಂಡುಬಂದರೂ ದೇವಗಣಗಳು ಹೊರಗಿನ ಸ್ವಚ್ಛತೆ ಗಿಂತ ಆಂತರಿಕ ಸ್ವಚ್ಛತೆಗೆ ಪ್ರಸನ್ನರಾಗುತ್ತಾರೆಂಬುದು ಈ ಕಥೆಯಿಂದ ಸ್ಪಷ್ಟವಾಗುತ್ತದೆ. ದೀನದಲಿತರ ರಕ್ಷಣೆಯೇ ಇವರ ಕಾರ್ಯವಾಗಿರು ತ್ತದೆ ಎಂದು ತಿಳಿದುಬರುತ್ತೆ.

೨) ಗಣೇಶನ ಸಹೋದರ ಕಾರ್ತಿಕೇಯ (ಷಣ್ಮುಖ) ನು ಒಬ್ಬ ದೊಡ್ಡ ಸೇನಾಧಿಪತಿ. ಕೆಲವು ಸಮಯದಲ್ಲಿ ಗಣೇಶನೇ ಪ್ರಧಾನ ಸೇನಾಧಿಪತಿಯಾಗಿದ್ದನು. ಕೆಲವು ರಾಕ್ಷಸರು ಮನುಷ್ಯರಿಂದಾಗಲೀ, ಯಕ್ಷ ರಿಂದಾಗಲೀ, ದೇವತೆಗಳಿಂದಾಗಲೀ ಸಾವು ಬರದಂತೆ ವರಗಳನ್ನು ಪಡೆದಿ ದ್ದರು. ಅವರ ಉಪಟಳ ಹೆಚ್ಚಾದಾಗ ಅವರ ಮೃತ್ಯುವಾಗಿ ಗಣೇಶನೇ ಬಂದನೆಂಬುದನ್ನು ಪುರಾಣಗಳಲ್ಲಿ ಕಾಣಬಹುದು. ಗಣಾಸುರ, ಗಜಾ ಸುರ, ಗಜಮುಖಾಸುರ ಇವರ ವಿಷಯಗಳನ್ನು ಹಿಂದಿನ ಅಧ್ಯಾಯ ಗಳಲ್ಲಿ ವಿಸ್ತಾರವಾಗಿ ಹೇಳಿದ್ದೇವೆ.

೩) ಗಣೇಶನ ಮತ್ತೊಂದು ಮಹತ್ಕಾರ್ಯದ ವರ್ಣನೆಯನ್ನು ಸ್ಕಂದಪುರಾಣದ ಕಾಶೀ ಖಂಡದಲ್ಲಿ ನೋಡಬಹುದು:—

ಒಂದುಸಾರಿ ಜಗತ್ತಿಗೆ ಕಷ್ಟವು ಬಂದಿತು. ಪ್ರಜೆಗಳು ಕಂಗಾಲಾ ದರು. ರಿಪುಂಜಯನೆಂಬ ಕ್ಷತ್ರಿಯ ಕುಮಾರನು ಕಾಡಿನಲ್ಲಿ ತಪಸ್ಸ

ಮಾಡುತ್ತಿದ್ದನು. ಬ್ರಹ್ಮನು ಅವನನ್ನು, ನೀನು ರಾಜ್ಯಭಾರವನ್ನು ವಹಿಸಿಕೊಂಡರೆ ಜಗತ್ತಿನಲ್ಲಿ ಸುಭಿಕ್ಷವಾಗುವುದೆಂದು ಹೇಳಿದನು. ಅದಕ್ಕೆ ರಿಪುಂಜಯನು ಭೂಲೋಕದಲ್ಲಿರುವ ಎಲ್ಲಾ ದೇವತೆಗಳು ಭೂಲೋಕ ವನ್ನು ಬಿಟ್ಟು ಹೋದರೆ ರಾಜ್ಯಭಾರ ವಹಿಸಿಕೊಳ್ಳುವುದಾಗಿ ಹೇಳಿದನು. ಅದಕ್ಕೆ ಬ್ರಹ್ಮನು ಒಪ್ಪಿದನು. ದೇವತೆಗಳೆಲ್ಲರೂ ಭೂಲೋಕವನ್ನು ತ್ಯಜಿಸಿದರು. ಅನಂತರ ಕುಮಾರ ರಿಪುಂಜಯನು ರಾಜ್ಯವನ್ನು ವಹಿಸಿ ಕೊಂಡು ದಿವೋದಾಸನೆಂದು ಪ್ರಸಿದ್ಧಿಯಾದನು. ಕಾಶಿಯೇ ಅವನ ರಾಜಧಾನಿಯಾಯಿತು. ರಾಜ್ಯದಲ್ಲಿ ಸುಖಶಾಂತಿಗಳು ನೆಲಸಿದವು. ದೇವತೆಗಳೆಲ್ಲರೂ ಹೋದರೂ ಸಹ ದಿವೋದಾಸನು ತನ್ನ ತಪಸ್ಸಿನ ಪ್ರಭಾವದಿಂದ ಎಲ್ಲಾ ಕೆಲಸಗಳನ್ನು ಸಾಂಗಗೊಳಿಸುತ್ತಿದ್ದನು. ಅವನ ರಾಜ್ಯದಲ್ಲಿ ರೋಗಿಗಳಿರಲಿಲ್ಲ. ದರಿದ್ರರಂತೂ ಇಲ್ಲವೇ ಇಲ್ಲ. ಅಕಾಲ ಮೃತ್ಯುವು ಸುಳಿಯುವಂತಿರಲಿಲ್ಲ. ಸ್ತ್ರೀಪುರುಷರು ತಮ್ಮ ತಮ್ಮ ಧರ್ಮಾಚರಣೆಯಲ್ಲಿ ನಿರತರಾಗಿದ್ದರು.

ದೇವತೆಗಳಿಗೆ ಕಾಶಿಯನ್ನು ಬಿಡಲು ದುಃಖವಾಗಲಿಲ್ಲ. ಆದರೆ ಶಿವನಿಗೆ ಅಪಾರ ದುಃಖವುಂಟಾಯಿತು. ಅವನಿಗೆ ಕೈಲಾಸವೇ ಮೊದಲಾದ ಅನೇಕ ಗಿರಿಧಾಮಗಳಿದ್ದರೂ ಕಾಶಿಯು ಅತ್ಯಂತ ಪ್ರಿಯವಾಗಿತ್ತು. ಕಾಶಿಗೆ ಹಿಂತಿರುಗಿ ಬರಲು ಉಪಾಯ ಕಾಣದವನಾಗಿದ್ದನು. ಕಾಶಿಯ ಸಮಾಚಾರವನ್ನು ತಿಳಿಯಲು ಶಿವನು ಗುಪ್ತಚಾರರನ್ನು ಕಳಿಸುತ್ತಿದ್ದನು. ಅವರಲ್ಲಿ ಒಬ್ಬನೂ ಬಂದು ಕಾಶಿಯ ಸಮಾಚಾರವನ್ನು ಶಿವನಿಗೆ ತಿಳಿಸು ತ್ತಿರಲಿಲ್ಲ. ಕಾಶಿಯಲ್ಲಿ ದಿವೋದಾಸನ ರಾಜ್ಯಭಾರವು ವೈಭವದಿಂದಿದ್ದಿತು. ಅಲ್ಲಿಯ ಸುಖಶಾಂತಿಗಳಿಗೆ ಮೋಹಿತರಾಗಿ ಗುಪ್ತಚಾರರು ಅಲ್ಲಿಯೇ ಉಳಿದುಬಿಡುತ್ತಿದ್ದರು. ಶಿವನು ಕಾಶಿಗೆ ಪುನಃ ಪ್ರವೇಶಮಾಡಲು ಚಿಂತಿಸತೊಡಗಿದನು. ಇದನ್ನು ನೋಡಿ ಗಣೇಶನು ಶಿವಪಾರ್ವತಿಯ ರನ್ನು ಪುನಃ ಕಾಶಿಗೆ ಪ್ರವೇಶಮಾಡಿಸುವುದಾಗಿ ಪ್ರತಿಜ್ಞೆಮಾಡಿದನು. ಗಣೇಶನು ಒಬ್ಬ ದೊಡ್ಡ ಜ್ಯೋತಿಷ್ಯನಾಗಿ ಕಾಶಿಗೆ ಬಂದನು. ಅವನ

ಖ್ಯಾತಿ ರಾಜನವರೆವಿಗೂ ಹರಡಿತು. ರಾಜನು ಜ್ಯೋತಿಷ್ಕ ಗಣಪತಿ ಯನ್ನು ಅರಮನೆಗೆ ಕರೆಸಿಕೊಂಡು, ಅವನ ಪಾಂಡಿತ್ಯಕ್ಕೆ ಮಾರು ಹೋದನು. ಆಗ ಜ್ಯೋತಿಷಿಯಾದ ಗಣೇಶನು ರಾಜನನ್ನು ಕುರಿತು ಇಂದಿಗೆ ಹದಿನೆಂಟನೇ ದಿವಸಕ್ಕೆ ಒಬ್ಬ ಬ್ರಾಹ್ಮಣನು ಬರುವನು, ಅವನು ಕೇಳಿದ್ದನ್ನು ನಡೆಸಿಕೊಡಬೇಕು. ಅದರಿಂದ ನಿನಗೆ ಮಂಗಳವಾಗುವು ದೆಂದು ಹೇಳಿ ಹೊರಟು ಹೋದನು. ಹದಿನೆಂಟನೇ ದಿವಸ ವಿಷ್ಣುವು ಬ್ರಾಹ್ಮಣನಾಗಿ ಬಂದನು. ಅವನು ರಾಜನನ್ನು ಬಹಳ ಹೊಗಳಿದನು. ಅನಂತರ ರಾಜನೆ! ನೀನು ಕಾಶಿಯಿಂದ ಶಿವನನ್ನು ಕಳುಹಿಸಿ ಬಹಳ ಪಾಪ ಮಾಡಿದ್ದೀಯೆ. ಅದರ ಪ್ರಾಯಶ್ಚಿತ್ತಕ್ಕಾಗಿ ಲಿಂಗವ್ರತವನ್ನು ಆಚರಿಸಬೇಕೆಂದು ಹೇಳಿದನು. ದಿವೋದಾಸನು ಅದೇರೀತಿ ಲಿಂಗವ್ರತ ವನ್ನಾಚರಿಸಿದನು. ಅವನು ಒಂದುದಿನ ಲಿಂಗವನ್ನು ಪೂಜಿಸುತ್ತಿರುವಾಗ ಆಕಾಶದಿಂದ ಒಂದು ವಿಮಾನ ಬಂದಿತು. ಅದರಲ್ಲಿ ಶಿವನ ಸೇವಕನಿದ್ದನು. ಆ ಸೇವಕನು ದಿವೋದಾಸನನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ಕೈಲಾಸಕ್ಕೆ ಕರೆದುಕೊಂಡು ಹೋದನು. ಅಲ್ಲಿ ರಾಜನು ಪರಶಿವಗತಿ (ಮುಕ್ತಿ) ಯನ್ನು ಹೊಂದಿದನು. ದಿವೋದಾಸನು ಕೈಲಾಸಕ್ಕೆ ಹೋದ ಮೇಲೆ ಶಿವಪಾರ್ವತಿಯರು ಕಾಶಿಗೆ ಬಂದರು. ಹೀಗೆ ಅನ್ಯರಿಂದ ಅಸಾಧ್ಯವಾದುದನ್ನು ಗಣೇಶನು ಸಾಧಿಸಿ ತೋರಿಸಿದನು. ಶಿವನು ಅವನನ್ನು ಬಹಳವಾಗಿ ಹೊಗಳಿದನು :—

ಯದಹಂ ಪ್ರಾಪ್ತವಾನಸ್ಮಿ ಪುರೀಂ ವಾರಾಣಸೀಂ ಶುಭಾಮ್ ।
ಮಯಾಪ್ಯತೀವ ದುಷ್ಪ್ರಾಪ್ಯಾಂ ಸಪ್ರಸಾದೋಽಸ್ಯ ವೈ
ಶಿಶೋಃ ॥
ಯದ್ದುಷ್ಪ್ರಸಾಧ್ಯಂ ಹಿ ಪಿತುರಪಿ ತ್ರಿಜಗತೀತಲೆ ।
ತತ್ಸೂನುನಾ ಸುಸಾಧ್ಯಂ ಸ್ಯಾದತ್ರದೃಷ್ಟಾಂತತಾ ಮಯಿ ॥
ಪುತ್ರವಾನಹಮೇವಾಸ್ಮಿ ಯಚ್ಚ ಮೆ ಚಿರಚಿಂತಿತಮ್ ।
ಸ್ವಪೌರುಷೇಣ ಕೃತವಾನಭಿಲಾಷಂ ಕರಸ್ಥಿತಮ್ ॥

ಈ ವಾರಾಣಸಿಯು ನನಗೆ ದುಷ್ಪ್ರಾಪ್ಯವಾಗಿತ್ತು. ಅದು ಈಗ ಪ್ರಾಪ್ತವಾಗಿದೆ. ಇದೆಲ್ಲವೂ ನನ್ನ ಪುತ್ರನ ಪ್ರಸಾದವೇ ಆಗಿದೆ. ಮೂರು ಲೋಕಗಳಲ್ಲಿ ತಂದೆಯಾದ ನನಗೆ ಅಸಾಧ್ಯವಾದುದನ್ನು ನನ್ನ ಮಗನಾದ ಗಣೇಶನು ಸಾಧಿಸಿ ಕೊಟ್ಟಿದ್ದಾನೆ. ನನ್ನ ಚಿರಚಿಂತಿತವಾದುದನ್ನು ನನ್ನ ಮಗನು ತನ್ನ ಸ್ವಸಾಮರ್ಥ್ಯದಿಂದಲೇ ಸಾಧಿಸಿದ್ದಾನೆ. ನಾನು ನಿಜವಾಗಿಯೂ ಪುತ್ರವಂತನೇ ಅಹುದು ಎಂದು ಹೇಳಿದ್ದಾನೆ.

ಳ) ಗಣೇಶನ ವಿವಾಹವು ಇಂದಿನವರೆವಿಗೂ ಒಂದು ಸಮಸ್ಯೆಯಾಗಿಯೇ ಉಳಿದಿದೆ. ಮನುಷ್ಯರು ವಿವಾಹವಾಗುತ್ತಾರೆ. ಅಂತೆಯೇ ಗಣೇಶನು ವಿವಾಹವಾಗಿರುವುದು ಅವನ ಚರಿತ್ರೆಗಳಲ್ಲಿ ಕಂಡುಬರುತ್ತದೆ. ಗಣೇಶ ಮತ್ತು ಅವನ ಸಹೋದರ ಸ್ಕಂದ ಇಬ್ಬರೂ ವಯಸ್ಕರಾದರು. ಅವರಲ್ಲಿ ಯಾರಿಗೆ ಮೊದಲು ಮದುವೆ ಮಾಡಬೇಕೆಂದು ಶಿವಪಾರ್ವತಿಯರಿಗೆ ಸಮಸ್ಯೆಯಾಯಿತು. ಅದಕ್ಕೆ ಒಂದು ಉಪಾಯ ಮಾಡಿದರು. ಯಾರು ನಿಮ್ಮಿಬ್ಬರಲ್ಲಿ ಪೃಥ್ವಿಯನ್ನು ಏಳುಸಾರಿ ಪ್ರದಕ್ಷಿಣೆ ಮಾಡಿ ಬರುವಿರೊ ಅವರಿಗೆ ಮೊದಲು ಮದುವೆ ಮಾಡುವುದಾಗಿ ಹೇಳಿದರು. ಸ್ಕಂದನು ನವಿಲನ್ನೇರಿ ಹೊರಟೇ ಬಿಟ್ಟನು. ಆದರೆ ಗಣಪತಿಗೆ ಸಮಸ್ಯೆಯಾಯಿತು, ನನ್ನ ಈ ಸ್ಥೂಲಶರೀರ, ಮೇಲಾಗಿ ಇಲಿಯ ವಾಹನ ಇದರಿಂದ ಪೃಥ್ವಿಯನ್ನು ಸುತ್ತುವುದು ಸಾಧ್ಯವೇ ಇಲ್ಲ ಎಂದು ಯೋಚಿಸಿದ. ಅವನಿಗೆ ಒಂದು ಉಪಾಯ ಹೊಳೆಯಿತು. ಜಗತ್ತಿನಲ್ಲಿ ತಂದೆತಾಯಿಗಳೇ ಶ್ರೇಷ್ಠ ಹಾಗು ಸರ್ವಸ್ವ; ಅವರನ್ನು ಪ್ರದಕ್ಷಿಣೆ ಮಾಡಿದರೆ ಪೃಥ್ವಿಯನ್ನು ಪ್ರದಕ್ಷಿಣೆ ಮಾಡಿದ ಫಲ ಪ್ರಾಪ್ತವಾಗುವುದೆಂದು ಶಾಸ್ತ್ರಕಾರರ ಅಭಿಮತವಾಗಿದೆ ಎಂದು ತಿಳಿದು ಶಿವಪಾರ್ವತಿಯರನ್ನು ಏಳುಸಾರಿ ಪ್ರದಕ್ಷಿಣೆ ಮಾಡಿದನು. ಅವರು ಗಣೇಶನ ಬುದ್ಧಿವಂತಿಕೆಯನ್ನು ಮೆಚ್ಚಿ ಅವನ ವಿವಾಹಕ್ಕೆ ಸಿದ್ಧತೆಗಳನ್ನು ಮಾಡುತ್ತಿದ್ದರು. ಸ್ಕಂದನು ಒಂದುಸಾರಿ ಪೃಥ್ವಿಯನ್ನು ಸುತ್ತಿಬಂದನು.

ಗಣೇಶನ ವಿವಾಹ ಸಿದ್ಧತೆಗಳನ್ನು ನೋಡಿದ ಸ್ಕಂದನಿಗೆ ಗಣೇಶನ ಈ ಯುಕ್ತಿ ಸರಿಬೀಳಲಿಲ್ಲ. ಶಾಸ್ತ್ರಗಳನ್ನು ವಿರೋಧಿಸುವಂತೆಯೂ ಇರಲಿಲ್ಲ. ತಂದೆತಾಯಿಗಳಾದರೂ ಇವನ ಮೋಸವನ್ನು ಖಂಡಿಸಲಿಲ್ಲ. ಸ್ಕಂದನು ಖಿನ್ನಮನಸ್ಕನಾಗಿ ಕ್ರೌಂಚಗಿರಿಗೆ ತಪಸ್ಸು ಮಾಡಲು ಹೊರಟು ಹೋದನು. ಅವನು ಅಖಂಡ ಬ್ರಹ್ಮಚರ್ಯವ್ರತವನ್ನು ಕೈಕೊಂಡನು. ವರ್ಷದಲ್ಲಿ ಒಂದುದಿನ ಮಾತ್ರ ತಂದೆತಾಯಿಗಳನ್ನು ನೋಡಲು ಕೈಲಾಸಕ್ಕೆ ಹೋಗಿಬರುತ್ತಿದ್ದನು. ಬ್ರಹ್ಮನಿಗೆ ಸಿದ್ಧಿ ಮತ್ತು ಬುದ್ಧಿ ಎಂಬ ಇಬ್ಬರು ಕುಮಾರಿಯರಿದ್ದರು. ಅವರೊಡನೆ ಗಣೇಶನ ವಿವಾಹ ವಾಯಿತು. ಸಿದ್ಧಿಗೆ ಲಕ್ಷ್ಯ ಮತ್ತು ಬುದ್ಧಿಗೆ ಲಾಭ ಎಂಬ ಪುತ್ರರಾದರು.

ಳ) ಮಹಾಭಾರತದ ರಚನೆಯ ಸಮಯದಲ್ಲಿ ವ್ಯಾಸನಿಗೆ ಗಣೇಶನು ಸಹಾಯ ಮಾಡಿದನೆಂದು ಹೇಳುತ್ತಾರೆ. ವ್ಯಾಸನು ಮಹಾಭಾರತವನ್ನು ರಚಿಸಬೇಕೆಂದು ನಿಶ್ಚಯಿಸಿದನು. ಯೋಗ್ಯನಾದ ಬರವಣಿಗೆಗಾರ ಅವನಿಗೆ ಬೇಕಾಗಿತ್ತು. ಗಣೇಶನು ಆ ಕೆಲಸವನ್ನು ಒಪ್ಪಿಕೊಂಡನು. ಆದರೆ ತನ್ನ ಲೇಖನಿಯು ನಿಲ್ಲದಂತೆ ಹೇಳಬೇಕೆಂದು ಕಟ್ಟಳೆ ಮಾಡಿದನು. ಅದಕ್ಕೆ ವ್ಯಾಸನು ನಾನು ಹೇಳಿದುದನ್ನು ಅರ್ಥಮಾಡಿಕೊಂಡು ಬರೆಯಬೇಕೆಂದು ಗಣೇಶನಿಗೆ ಹೇಳಿದನು. ವ್ಯಾಸನು ನೂರು ಶ್ಲೋಕಗಳನ್ನು ಹೇಳಿದಮೇಲೆ ಒಂದು ಕಠಿನವಾದ ಶ್ಲೋಕವನ್ನು ಹೇಳುತ್ತಿದ್ದನು. ಅದನ್ನು ಅರ್ಥಮಾಡಿಕೊಂಡು ಬರೆಯುವುದರೊಳಗಾಗಿ ಮತ್ತೆ ನೂರು ಶ್ಲೋಕಗಳನ್ನು ಸಿದ್ಧಪಡಿಸಿಕೊಳ್ಳುತ್ತಿದ್ದನು. ಈರೀತಿಯಾಗಿ ಮಹಾಭಾರತ ಸಂಪೂರ್ಣವಾಯಿತೆಂದು ಕಥೆ ಇದೆ. ಈ ಕಥೆ ಪ್ರಾಚೀನ ಗ್ರಂಥಗಳಲ್ಲಿ ಕಂಡುಬರುವುದಿಲ್ಲ. ಎರಡನೆಯದಾಗಿ ಹಿಂದಿನ ಉಲ್ಲೇಖಗಳಲ್ಲಿ ಅವನು ಲೇಖಕನಾದ ಪ್ರಸಂಗ ಉಕ್ತವಾಗಿಲ್ಲ. ಮಹಾಭಾರತಕ್ಕಿಂತ ಮೊದಲು ಅಥವಾ ಅನಂತರ ಗಣೇಶನು ಲೇಖಕನಾಗಿದ್ದುದು ಯಾವ ಪುರಾಣದಲ್ಲಿಯೂ ಹೇಳಿಲ್ಲ. ಮಹಾಭಾರತದಲ್ಲಿ ಗಣೇಶನ ಸೊಂಡಿಲಿನ ಮತ್ತು ಗಜಮುಖದ ಉಲ್ಲೇಖಗಳಿರುವುದಿಲ್ಲ.

# ಅಧ್ಯಾಯ ೬

## ಯೋಗಶಾಸ್ತ್ರದಲ್ಲಿ ಗಣೇಶ

ಅಧ್ಯಾತ್ಮಶಾಸ್ತ್ರದ ಪ್ರಧಾನ ಅಂಗ ಯೋಗವಿದ್ಯೆ. ಚಿತ್ತವಿಲಾಸಕ್ಕಾಗಿ ಈ ವಿದ್ಯೆಯನ್ನು ಬೋಧಿಸುತ್ತಿರಲಿಲ್ಲ. ಇದರ ಮುಖ್ಯ ಪ್ರಯೋಜನ ಮುಕ್ತನಾಗುವುದು. ಮೋಕ್ಷವನ್ನು ಪಡೆಯಲು ಗುರುಮುಖದಿಂದ ದರ್ಶನಗಳನ್ನು ಕೇಳುವುದು, ಕೇಳಿದ್ದನ್ನು ಅಧ್ಯಯನ ಮಾಡುವುದು ಅನಂತರ ನಿರಂತರವಾಗಿ ಅನುಷ್ಠಾನಮಾಡಿ ಮೋಕ್ಷವನ್ನು ಪಡೆಯುವುದು. ಇವುಗಳನ್ನು ಕ್ರಮವಾಗಿ ಆಚರಿಸಬೇಕು. ಉಪನಿಷತ್ತುಗಳಲ್ಲಿ ಯೋಗಾಭ್ಯಾಸವನ್ನು ಮಾಡಬೇಕೆಂಬ ಆದೇಶವಿದೆ. ಅದನ್ನು ಅಭ್ಯಾಸಮಾಡುವ ಕ್ರಮವು ಹೇಳಲ್ಪಟ್ಟದೆ.

ಸ್ಪಷ್ಟವಾಗಿ ಯೋಗಾಭ್ಯಾಸವನ್ನು ಉಪನಿಷತ್ತುಗಳಲ್ಲಿ ಅಷ್ಟಾಗಿ ಹೇಳಿಲ್ಲವೆನ್ನಬಹುದು. ಗುರುಕುಲಗಳಲ್ಲಿ ಶಿಷ್ಯರು ಗುರುಗಳಿಂದ ಪ್ರತ್ಯಕ್ಷವಾಗಿ ಶಿಕ್ಷಣವನ್ನು ಪಡೆಯುತ್ತಿದ್ದರು. ಅಷ್ಟೇ ಯೋಗಾಭ್ಯಾಸಕ್ಕೆ ಸಾಕಾಗುತ್ತಿತ್ತು. ಅನಂತರ ಅನೇಕ ಸ್ವತಂತ್ರವಾದ ಯೋಗ ಗ್ರಂಥಗಳು ರಚಿಸಲ್ಪಟ್ಟವು. ಅವುಗಳಲ್ಲಿ ಪಾತಂಜಲಮುನಿಯ ಯೋಗದರ್ಶನವು ಒಂದು ಸಿದ್ಧಾಂತ ಗ್ರಂಥ. ಘೇರಂಡಸಂಹಿತೆ, ಹಠಯೋಗಪ್ರದೀಪಿಕೆ, ಶಿವಸಂಹಿತೆ, ಗೋರಕ್ಷಸಂಹಿತೆ ಇತ್ಯಾದಿ ಗ್ರಂಥಗಳು ಮುಖ್ಯವಾದವುಗಳು. ಇದಲ್ಲದೆ ಸಾಮಾನ್ಯವಾಗಿ ಎಲ್ಲಾ ಪುರಾಣಗಳಲ್ಲಿಯೂ ಸಹ ಯೋಗದ ವಿಷಯವು ಬಂದಿರುತ್ತದೆ.

ಯೋಗಾಚಾರ್ಯರ ಅಭಿಪ್ರಾಯದಂತೆ ಮೇರುದಂಡದ ಮಧ್ಯದಲ್ಲಿ ಸುಷುಮ್ನಾ ಎಂಬ ನಾಡಿ ಇದೆ. ಆ ನಾಡಿಯು ಬ್ರಹ್ಮರಂಧ್ರವನ್ನು ಪ್ರವೇಶಿಸಿ ಬುದ್ಧಿಯಲ್ಲಿಯ ನಾಡೀ ಸಮೂಹದಲ್ಲಿ ಸೇರುತ್ತದೆ. ಸಾಮಾನ್ಯವಾಗಿ ಪ್ರಾಣವು ಶರೀರದ ಅಂಗಾಗಗಳಲ್ಲಿ ಸಂಚರಿಸುತ್ತಿರುತ್ತದೆ.

ಆದರ ಜೊತೆಗೆ ಮನಸ್ಸು ಸಹ ಚಂಚಲವಾಗಿರುತ್ತದೆ. ಸಾಧಕನು ತನ್ನ ಸಾಧನೆಗಳಿಂದ ಪ್ರಾಣವನ್ನು ಸುಷುಮ್ನಾ ನಾಡಿಗೆ ತಂದು ನಿಲ್ಲಿಸಿ ಊರ್ಧ್ವಗಾಮಿಯನ್ನಾಗಿ ಮಾಡುತ್ತಾನೆ. ಅದು ಊರ್ಧ್ವಗತಿಯನ್ನು ಹೊಂದಿದಂತೆ ಮನಸ್ಸು ಶಾಂತವಾಗುತ್ತಿರುತ್ತದೆ. ಸಾಧಕನ ಜ್ಞಾನ ಮತ್ತು ಶಕ್ತಿಗಳು ಅಭಿವೃದ್ಧಿಯನ್ನು ಹೊಂದುತ್ತವೆ. ಸುಷುಮ್ನಾ ನಾಡಿಯಲ್ಲಿ ಆದಿಯಿಂದ ಅಂತ್ಯದವರೆವಿಗೆ ಕೆಲವು ನಾಡೀ ಸಮೂಹಗಳಿವೆ. ಅವುಗಳನ್ನು ಚಕ್ರಗಳೆಂದು ಕರೆಯುತ್ತಾರೆ. ಅವು ಕ್ರಮವಾಗಿ ಮೂಲಾಧಾರ ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ ಮತ್ತು ಆಜ್ಞಾ ಎಂಬ ಷಟ್ ಚಕ್ರಗಳಾಗಿವೆ. ಪ್ರತಿಯೊಂದು ಚಕ್ರದ ಅನುಭವವು ಅಪೂರ್ವವಾದುದು. ಅದನ್ನು ವರ್ಣಿಸಲಾಗುವುದಿಲ್ಲ. ಅವುಗಳನ್ನು ತಿಳಿಯಬೇಕಾದರೆ ಮುಖ್ಯವಾಗಿ ಸದ್ಗುರುವಿನ ಅನುಗ್ರಹ ಬೇಕು. ಅವುಗಳ ವರ್ಣನೆ ಇಲ್ಲಿ ಅಪ್ರಾಸಂಗಿಕ. ಯೋಗದರ್ಶದ ಕೆಲವು ಗ್ರಂಥಗಳಲ್ಲಿಯ ಚಕ್ರಗಳ ವರ್ಣನೆಗಳಲ್ಲಿ ಗಣೇಶನ ಹೆಸರು ಬಂದಿರುವುದರಿಂದ ಯೋಗದ ವಿಷಯವಾಗಿ ಎರಡು ಮಾತುಗಳನ್ನು ಹೇಳಬೇಕಾಯಿತು. ಲಿಂಗ ಸ್ಥಾನದಿಂದ ಸ್ವಲ್ಪ ಕೆಳಗಡೆ ಗುದದ್ವಾರದಿಂದ ಸ್ವಲ್ಪ ಮೇಲೆ ಮೂಲಾಧಾರ ಚಕ್ರವಿದೆ. ಇದರ ವರ್ಣನೆಗಳು ಷಟ್ ಚಕ್ರನಿರೂಪಣೆಯ ಗ್ರಂಥಗಳಲ್ಲಿ ಒಂಭತ್ತು ಶ್ಲೋಕಗಳಿಂದ ವರ್ಣಿಸಲ್ಪಟ್ಟವೆ. ಉದಾಹರಣೆಗಾಗಿ ಕೆಲವನ್ನು ಕೊಡಲಾಗಿದೆ:—

ಆಧಾರಪದ್ಮಂ ಸುಷುಮ್ನಾಸ್ಯ ಲಗ್ನಂ ಧ್ವಜಾಧೋ
ಗುದೋರ್ಧ್ವಂ ಚತುಶ್ಶೋಣಪತ್ರಮ್ ।
ಅಧೋವಕ್ತ್ರಮುದ್ಯತ್ ಸುವರ್ಣಾಭವರ್ಣೈ-
ರ್ವಕಾರಾದಿಸಾಂತೈರ್ಯುತಂ ವೇದವರ್ಣೈಃ ॥
ಅಮುಷ್ಮಿನ್ ಧರಾಯಾಶ್ಚತುಷ್ಕೋಣ ಚಕ್ರಂ
ಸಮುದ್ಭಾಸಿ ಶೂಲಾಷ್ಟಕೈರಾವೃತಂ ತತ್ ।
ಲಸತ್ಪೀತವರ್ಣ........................................
........................................॥

ಆದಿಯ ನಾಲ್ಕು ಶ್ಲೋಕ ಮತ್ತು ಐದನೇ ಶ್ಲೋಕದ ಕೆಲವು ಅಂಶಗಳಿವೆ. ಆಧಾರ ಚಕ್ರವು ಪದ್ಮ ಸುಷುಮ್ನಾ ನಾಡಿಯ ಮುಖಕ್ಕೆ ಸೇರಿದ್ದಾಗಿದೆ. ಅದು ಲಿಂಗ ಮತ್ತು ಗುದದ್ವಾರದ ಮಧ್ಯದಲ್ಲಿದೆ. ಮೂಲಾಧಾರ ಚಕ್ರಕ್ಕೆ ನಾಲ್ಕು ದಳಗಳಿವೆ. ಅವುಗಳ ಬಣ್ಣ ಕೆಂಪು. ಅದು ಅಧೋಮುಖವಾಗಿದೆ. ದಳಗಳಲ್ಲಿ ವ. ಶ. ಷ. ಸ. ವರ್ಣಗಳಿವೆ. ಅದರ ಕರ್ಣಿಕೆಯಲ್ಲಿ ಹಳದೀ ಬಣ್ಣದ ಚತುಷ್ಕೋಣ ಚಕ್ರವಿದೆ. ಅದರ ಎಂಟು ದಿಕ್ಕುಗಳಲ್ಲಿ ಶೂಲ ಕುಲಾಚಲ (ಪರ್ವತ) ಗಳಿವೆ. ಮುಂದೆ ಆರನೇ ಶ್ಲೋಕದಲ್ಲಿ ಚತುರ್ಬಾಹುಭೂಷಿತ ಗಜೇಂದ್ರಾಧಿರೂಢನಾದ ಇಂದ್ರ ಮತ್ತು ಸೃಷ್ಟಿಕರ್ತನಾದ ವೇದಬಾಹು ಬ್ರಹ್ಮನ ನಿವಾಸವೆಂದು ಹೇಳಿದೆ. ಆ ಸ್ಥಾನವನ್ನು ಗಣೇಶನ ಸ್ಥಾನವೆಂದು ಹೇಳುತ್ತಾರೆ. ಸಿದ್ಧ ಮತ್ತು ನಾಥರಿಂದ ಈ ಪರಂಪರೆಯು ನಾಥಪಂಥದವರಲ್ಲಿ ಬಂದಿತು. ಸಂತ ಕಬೀರನು ತನ್ನ ಸಿದ್ಧಾಂತದಲ್ಲಿ ಷಟ್‌ಚಕ್ರಗಳನ್ನು ವರ್ಣಿಸಿದ್ದಾನೆ. ಅವನು ಪ್ರಥಮ ಸ್ಥಾನಕ್ಕೆ ಗಣೇಶನ ಸ್ಥಾನವೆಂದು ಹೇಳಿದ್ದಾನೆ. ಉದಾಹರಣೆಗಾಗಿ ಸಂತ ಕಬೀರನ ವಾಣಿಯನ್ನು ನೋಡಬಹುದು:-

**ಮೂಲಚಕ್ರ ಗನೇಸಭಾಸಾ ರಕ್ತಬರನ ಜಹ ಜಾನಿಯೆ ।**
**ಕ್ಲಿಂಗ್ ಜಾಪ ಕುಲೀನ ತಜ ಸಬ್ ಶಬ್ದ ಹಮಾರಾ ಮಾನಿಯೆ ॥**

(ಕ್ಲಿಂಗ್ ≡ ಕ್ಲೀಂ) ಯೋಗದ ಪ್ರಾಮಾಣಿಕ ಗ್ರಂಥಗಳಲ್ಲಿ ಎಲ್ಲಿಯೂ ಪ್ರಥಮ ಸ್ಥಾನಕ್ಕೆ ಗಣೇಶನ ಸ್ಥಾನವೆಂದು ಹೇಳಿಲ್ಲ. ಆದರೂ ಈ ಒಂದು ಸಂಪ್ರದಾಯವಿದೆ. ಉದಾಹರಣೆಗಾಗಿ 'ಬಾಲಾ ಪದ್ಧತಿ' ಯ ಶ್ಲೋಕವನ್ನು ನೋಡಬಹುದು. ಇದರಲ್ಲಿ ಆರು ಚಕ್ರಗಳಿವೆ. ಅವುಗಳಿಗೆ ಆರು ಹೆಸರುಗಳನ್ನು ಕೊಡಲಾಗಿದೆ. ಮೂಲಾಧಾರ ಚಕ್ರದ ಸ್ವಾಮಿ ಗಣೇಶನೆಂದು ಹೇಳಿದೆ:—

**ಗಣೇಶ್ವರೋ ವಿಧಿರ್ವಿಷ್ಣುಃ ಶಿವೋ ಜೀವೋ ಗುರುಸ್ತಥಾ ।**
**ಷಡೇತೇ ಹಂಸತಾಮೇತ್ಯ ಮೂಲಾಧಾರಾದಿಷು ಸ್ಥಿತಾಃ ॥**

ಗಣೇಶ, ಬ್ರಹ್ಮ, ವಿಷ್ಣು, ಶಿವ, ಜೀವ ಮತ್ತು ಗುರು ಇವರು ಕ್ರಮವಾಗಿ ಮೂಲಾಧಾರಾದಿ ಷಟ್ ಚಕ್ರಗಳಲ್ಲಿದ್ದಾರೆಂದು ಹೇಳಿದೆ.

ಈ ಪರಂಪರೆಯು ಅರ್ವಾಚಿನ ಹಾಗು ಭ್ರಾಂತಿ ಮೂಲವೆಂದು ನನ್ನ ಅಭಿಪ್ರಾಯ. "ಭುವನಜ್ಞಾನಂ ಸೂರ್ಯೆಸಂಯಮಾತ್" ಎಂಬ ಸೂತ್ರಕ್ಕೆ ವ್ಯಾಖ್ಯೆಯನ್ನು ಬರೆಯುತ್ತಾ ವಾಚಸ್ಪತಿ ಮಿಶ್ರರು ಭೂಲೋಕದ ಕೆಳಗಡೆ ಅಪದೇವತೆಗಳ ಲೋಕವಿದೆ. ಅಲ್ಲಿ ಪಿಶಾಚ, ರಾಕ್ಷಸ ಬ್ರಹ್ಮರಾಕ್ಷಸ, ಬೇತಾಳ, ಕೂಷ್ಮಾಂಡ, ಭೈರವ, ವಿನಾಯಕರಾದಿ ಅಪದೇವತೆಗಳಿದ್ದಾರೆಂದು ಹೇಳಿದ್ದಾರೆ. ಭೂ ತತ್ವ ಮತ್ತು ಭೂಲೋಕದ ಸಂಬಂಧ ಮೂಲಾಧಾರ ಚಕ್ರಕ್ಕಿದೆ. ಷಟ್ ಚಕ್ರನಿರೂಪಣೆಯಂತೆ ಈ ಚಕ್ರವು ಚತುಷ್ಕೋಣವುಳ್ಳದ್ದು. ಈ ಚತುಷ್ಕೋಣವನ್ನು ಭೂ ತತ್ವದ ಪ್ರತೀಕವೆಂದು ಹೇಳುತ್ತಾರೆ. ಆದುದರಿಂದ ವಿನಾಯಕರು ಮತ್ತು ಅವರ ಅಧಿಪತಿ ಗಣೇಶನ ಸ್ಥಾನ ಮೂಲಾಧಾರ ಚಕ್ರದಿಂದ ಕೆಳಗಡೆ ಇದೆ. ಆದರೂ ಮಂಗಳ ಕಾರ್ಯಗಳ ಸಂಬಂಧವನ್ನು ಗಣೇಶನಿಗೆ ಹೇಳಿ ಅವನನ್ನು ಮೂಲಾಧಾರ ಚಕ್ರಕ್ಕೆ ಬಲಾತ್ಕಾರವಾಗಿ ಎಳೆದು ತರಲಾಗಿದೆ. ಮುಲಾಧಾರ ಚಕ್ರದಲ್ಲಿ ಗಣೇಶನ ದರ್ಶನವಾದರೆ ಯೋಗ ಸಿದ್ಧಿಸುವುದೆಂದು ಹೇಳಲಾಗಿದೆ. ಸ್ವಸ್ತಿಕ ಚಿನ್ಹೆಯು ಚತುಷ್ಕೋಣದ ರೂಪಾಂತರ. ಅದು ಗಣೇಶನ ಚಿನ್ಹೆಯಾಯಿತು. ನಿಜವಾದ ಯೋಗಿಗಳಲ್ಲದವರು ಗಣೇಶನಿಗೂ ಮೂಲಾಧಾರ ಚಕ್ರಕ್ಕೂ ಸಂಬಂಧವನ್ನು ಕಲ್ಪಿಸಿದ್ದಾರೆ. ಇದು ನನ್ನ ಸ್ವಂತ ಅಭಿಪ್ರಾಯ. ಆದರೆ ಮೇಲಿನ ವಿಷಯವನ್ನು ಅಧಿಕರಿಸಲು ಇಂದಿನವರೆವಿಗೆ ಪ್ರಾಮಾಣಿಕ ಸಾಮಾಗ್ರಿಗಳು ದೊರೆತಿಲ್ಲ. ಷಟ್ ಚಕ್ರ ನಿರೂಪಣಕಾರರು ಗಣೇಶ ಮತ್ತು ಮೂಲಾಧಾರ ಚಕ್ರಗಳ ಸಂಬಂಧವನ್ನು ನಿರೂಪಿಸಿಲ್ಲವಾದುದರಿಂದ ಅವರದು ತಪ್ಪೆನ್ನಲಾಗುವುದಿಲ್ಲ. ಮಹಾನಿರ್ವಾಣ ತಂತ್ರದಲ್ಲಿ :—

ಆಧಾರಚಕ್ರಂ ತತ್ಪದ್ಮಂ ಧರಾಮಧ್ಯೆ ಚತುರ್ದಳಂ |
ಪದ್ಮಮಧ್ಯೆ ಬೀಜಕೋಶೆ ಕ್ಷಿತಿಚಕ್ರಂ ಮನೋಹರಮ್ ||
ತತ್ರೈವ ನಿವಸೇದ್ಬ್ರಹ್ಮಾ ಸೃಷ್ಟಿಕರ್ತಾ ಪ್ರಜಾಪತಿಃ |
ವಾಮಭಾಗೇ ಚ ಸಾವಿತ್ರೀ ವೇದಮಾತಾ ಸುರೇಶ್ವರೀ ||

ಆಧಾರ ಚಕ್ರದ ಮಧ್ಯದಲ್ಲಿ ಚತುರ್ದಳ ಕಮಲವಿದೆ. ಆ ಕಮಲದ ಮಧ್ಯೆ ಬೀಜಕೋಶದಲ್ಲಿ ಸುಂದರವಾದ ಕ್ಷಿತಿ ಚಕ್ರವಿದೆ. ಅಲ್ಲಿ ಸೃಷ್ಟಿಕರ್ತನಾದ ಬ್ರಹ್ಮನು ವಾಸಿಸುತ್ತಾನೆ. ಅವನ ಎಡಗಡೆ ವೇದಮಾತೆ ಸುರೇಶ್ವರೀ ಸಾವಿತ್ರಿಯು ಇರುವಳೆಂದು ವರ್ಣಿಸಲ್ಪಟ್ಟಿದೆ.



# ಅಧ್ಯಾಯ ೭

## ತಂತ್ರದಲ್ಲಿ ವಿಘ್ನರಾಜ

ತಂತ್ರ ಗ್ರಂಥಗಳಲ್ಲಿ ಗಣೇಶನ ವಿಷಯವಾಗಿ ಅನೇಕ ವರ್ಣನೆಗಳಿವೆ. ಒಂದು ಸಮಯದಲ್ಲಿ ತಂತ್ರಗಳು ಅನೀತಿ ಬೋಧಕಗಳೆಂದು ತಿಳಿಯಲಾಗುತ್ತಿತ್ತು. ಪೂಜಾಪಾಠಗಳ ನೆಪದಿಂದ ವ್ಯಭಿಚಾರಗಳಿಗೆ ಪ್ರಚೋದನೆ ಮಾಡಲಾಗುತ್ತಿತ್ತೆಂದು, ಮತ್ತು ತಂತ್ರೋಕ್ತಕ್ರಿಯೆಗಳು ವಿಷಯವಾಸನೆಗಳ ತೃಪ್ತಿಗಾಗಿ ಆಚರಿಸಲ್ಪಡುತ್ತಿದ್ದವೆಂದು ತಿಳಿದಿದ್ದರು. ರತಿವಿಲಾಸದ ಉನ್ನತ ತುಷ್ಟಿಯ ಉಪಾಯಗಳು ತಂತ್ರೋಪಾಸನೆಗಳಲ್ಲಿ ಕಂಡುಬರುತ್ತವೆ. ಈ ಭಾವನೆಯು ಕ್ರಮವಾಗಿ ಕಡಿಮೆಯಾಗುತ್ತಾ ಬಂದಿದೆ. ಪಶು (ಜೀವ) ಸಾಧಕನಿಂದ ತಂತ್ರಾಚಾರ್ಯರು ಹೇಳಿದ ಮಾರ್ಗಗಳು ದುರುಪಯೋಗವಾಗಿರುವುದು ಕಾಣುತ್ತದೆ. ಇದರಿಂದ ಸಮಸ್ತ ತಂತ್ರಶಾಸ್ತ್ರವನ್ನು ದೂಷಿಸಲು ಶಕ್ಯವಿಲ್ಲ. ತಂತ್ರಶಾಸ್ತ್ರದ ಅನುಶೀಲನೆಯಿಂದ ಕೆಲವು ಅಧ್ಯಾತ್ಮ ಶಾಸ್ತ್ರದ ಸಮಸ್ಯೆಗಳನ್ನು ಅರಿಯುವ ಸಾಧನಗಳು ತಿಳಿಯುತ್ತವೆ. ತಂತ್ರಗ್ರಂಥಗಳ ಭಾಷೆ ತಿಳಿಯಲು ಕಷ್ಟವಾಗಿದೆ. ಸಾಧಕನು ಮಾತ್ರ ಆ ಭಾಷೆಗೆ ಅರ್ಥಮಾಡಬಲ್ಲನು. ಆದರೆ ಅವನು ತಿಳಿದುಕೊಂಡು ವ್ಯಾಖ್ಯಾನಮಾಡುತ್ತಿರಲಿಲ್ಲ. ಮೌನವೇ ಒಳ್ಳೆಯದೆಂದು ತಿಳಿಯುತ್ತಿದ್ದನು. ತಂತ್ರೋಪಾಸನೆಯ ಮರೆಯಲ್ಲಿ ಮದ್ಯಮೈಥುನಾದಿಗಳ ಸೇವನೆಗೆ ಅವಕಾಶವಿದೆ. ಸಾಧಕರಲ್ಲದ ಜನಗಳು ಕೇವಲ ಈ ವಿಷಯಗಳಲ್ಲಿ ಆಸಕ್ತರಾಗುತ್ತಿದ್ದರು.

ತಂತ್ರಗಳ ಇತಿಹಾಸ ಬಹಳ ಪ್ರಾಚೀನವಾದುದು. ಎಂದ ಮಾತ್ರಕ್ಕೆ ಅವುಗಳು ಆಕಾಶದಿಂದ ಇಳಿದುಬಂದವೇನಲ್ಲ. ಅವುಗಳ ಮೂಲ ವೇದಾಂತದಲ್ಲಿದೆ. ಆದರೆ ಬಹಳ ಕಾಲದ ಅನಂತರ ಅವುಗಳ ವಿಕಾಸವಾ

ಯಿತು. ಮಹಾಯಾನ ಬೌದ್ಧರ ಉಪಾಸನಾ ಪದ್ಧತಿ ಮತ್ತು ತಂತ್ರೋಪಾಸನೆಯ ರೀತಿಯು ಒಂದೇ ಆಗಿವೆ. ತಂತ್ರಗಳಲ್ಲಿ ರುದ್ರಯಾಮಿಳ ಎಂಬ ಗ್ರಂಥವು ಪ್ರಾಮಾಣಿಕವಾದುದು. ಇದರಲ್ಲಿ ಒಂದು ಕಥೆ ಇದೆ. ಒಂದುಸಾರಿ ವಶಿಷ್ಠನಿಗೆ ವೈರಾಗ್ಯ ಬಂದಿತು. ಮುಮುಕ್ಷುವಾಗಬೇಕೆಂದು ಆತ್ಮಜ್ಞಾನಕ್ಕಾಗಿ ವ್ಯಾಕುಲನಾದನು. ಗುರುವಿಗಾಗಿ ಹುಡುಕಾಡಿದನು. ಶಾಸ್ತ್ರಗಳಲ್ಲಿ ಹೇಳಿರುವ ಸಾಧನೆಗಳನ್ನೆಲ್ಲಾ ಸಾಧಿಸಿದರೂ ಶಾಂತಿ ಸಿಕ್ಕಲಿಲ್ಲ. ಅವನು ದೇವಪ್ರೇರಣೆಯಿಂದ ಚೀನಾದೇಶಕ್ಕೆ ಹೋದನು. ಅಲ್ಲಿ ಅವನು ಮಹಾಮುನಿ 'ಲಾಮ'ನ ದರ್ಶನವನ್ನು ಪಡೆದನು. ಅವನ ಉಪದೇಶದಂತೆ ಅನುಷ್ಠಾನಮಾಡಿ ಮುಕ್ತನಾದನು. ಈ ಕಥೆಯ ಐತಿಹಾಸಿಕತೆಯ ವಿಷಯವಾಗಿ ನಾನು ಏನನ್ನೂ ಹೇಳಲಾರೆ. ಇದೆಲ್ಲವೂ ಅವರವರ ನಂಬಿಕೆ ಕಲಿಯುಗದಲ್ಲಿ ವೈದಿಕ ಕರ್ಮಗಳು ಶಿಥಿಲಗೊಂಡು ತಾಂತ್ರಿಕ ಸಾಧನೆಗಳೇ ಪ್ರಬಲವಾಗಿವೆ ಎಂದು ವಿಶ್ವಾಸ ಪಡುವವರಿಗೆ ಈ ಕಥೆಯಲ್ಲಿ ಶ್ರದ್ಧೆ ಇರಬಹುದು. ನಾನು ಹೇಳುವುದಾದರೂ ಇಷ್ಟೆ ಟಿಬೆಟ್ ಮಹಾಯಾನ ಬೌದ್ಧರ ಪ್ರಧಾನ ಪೀಠವಾಗಿದೆ. ಟಿಬೆಟ್ಟಿನ ಭಾಷೆಯಲ್ಲಿ ಸಾಧು ಅಥವಾ ಧರ್ಮೋಪದೇಶಕರಿಗೆ 'ಲಾಮ' ಎಂದು ಕರೆಯುತ್ತಾರೆ. ಈ ಕಥೆಯಿಂದ ಮಹಾಯಾನ ಬೌದ್ಧರ ಹಾಗು ತಂತ್ರಗಳ ಸಂಬಂಧ ಘನೀಭೂತವಾಗುತ್ತದೆ. ಮುಂದೆ ಒಂಭತ್ತನೇ ಅಧ್ಯಾಯದಲ್ಲಿ ಬೌದ್ಧಗ್ರಂಥಗಳಲ್ಲಿ ಗಣೇಶನು ಪ್ರಧಾನ ಸ್ಥಾನವನ್ನು ಗಳಿಸಿರುವುದನ್ನು ಕಾಣಬಹುದು. ಎಲ್ಲಾ ಮಂಗಳಕಾರ್ಯಗಳಲ್ಲಿ ಗಣೇಶ, ನವಗ್ರಹ ಹಾಗು ಮಾತೃಕೆಯರನ್ನು ಪೂಜಿಸಬೇಕೆಂದು ತಂತ್ರಾಚಾರ್ಯರ ಆದೇಶವಿದೆ. ಮಹಾನಿರ್ವಾಣ ತಂತ್ರದ ಹತ್ತನೇ ಉಲ್ಲಾಸದಲ್ಲಿ ಹೇಳಿರುವ ಪೂಜಾವಿಧಾನವನ್ನು ಇಲ್ಲಿ ಉದಾಹರಿಸುತ್ತೇವೆ. ಗುರುದೀಕ್ಷೆಯ ಸಮಯದಲ್ಲಿ ಗಣಪತಿಯನ್ನು ಪೂಜಿಸಬೇಕು. ಈ ಪೂಜೆಯನ್ನು ಗುರುದೀಕ್ಷೆಗಿಂತ ಒಂದು ದಿನ ಮೊದಲು ಮಾಡಬೇಕು.

ಪೂಜಾ ವಿಧಾನ:— ಮೊದಲು ಗಣಪತಿಯ ಬೀಜ ಮಂತ್ರ ದೊಂದಿಗೆ ಆರುಸಾರಿ ದೀರ್ಘಶ್ವಾಸಗಳ ಸಹಿತ ಷಡಂಗನ್ಯಾಸವನ್ನು ಮಾಡಬೇಕು. 'ಗ' ಎಂಬುದು ಗಣೇಶನ ಬೀಜಮಂತ್ರ. ಭೂತಡಾಮರ ತಂತ್ರದ ರೀತಿಯಾಗಿ "ಗಕಾರೋ ಬಿಂದುಮಾನ್ ವಿಘ್ನರಾಜಂ ಗಣೇಶಬೀಜಕಮ್" ಬಿಂದು ಸಹಿತ ಗಕಾರವು ವಿಘ್ನರಾಜನ ಮತ್ತು ಗಣೇಶನ ಬೀಜಮಂತ್ರವಾಗಿದೆ. ಅದರ ಋಷಿ ಗಣಕ, ಛಂದ-ನಿವೃತ್ ವಿಘ್ನದೇವತೆ ಮತ್ತು ವಿಘ್ನಶಾಂತ್ಯರ್ಥಂ ಎಂದು ವಿನಿಯೋಗವಿದೆ.

ಅಂಗುಷ್ಠಾದಿಷಡಂಗನ್ಯಾಸವಿಧಿ:—

| | | |
|---|---|---|
| ಗಾಂ | ಅಂಗುಷ್ಠಾಭ್ಯಾಮ್ | ನಮಃ |
| ಗೀಂ | ತರ್ಜನೀಭ್ಯಾಮ್ | ನಮಃ |
| ಗೂಂ | ಮಧ್ಯಮಾಭ್ಯಾಮ್ | ನಮಃ |
| ಗೈಂ | ಅನಾಮಿಕಾಭ್ಯಾಮ್ | ನಮಃ |
| ಗೌಂ | ಕನಿಷ್ಠಾಭ್ಯಾಮ್ | ನಮಃ |
| ಗಃ | ಕರತಲಕರಪೃಷ್ಠಾಭ್ಯಾಮ್ | ಫಟ್ |

ಹಸ್ತವನ್ನು ಪವಿತ್ರಗೊಳಿಸಿದಮೇಲೆ ಶರೀರದ ಉಳಿದ ಉತ್ತಮ ಭಾಗಗಳನ್ನು ಪವಿತ್ರಗೊಳಿಸಬೇಕು. ಅದಕ್ಕೆ ಈ ಮಂತ್ರಪಾಠವಿದೆ:—

| | | |
|---|---|---|
| ಗಾಂ | ಹೃದಯಾಯ | ನಮಃ |
| ಗೀಂ | ಶಿರಸೇ | ಸ್ವಾಹಾ |
| ಗೂಂ | ಶಿಖಾಯೈ | ವಷಟ್ |
| ಗೈಂ | ಕವಚಾಯ | ಹುಮ್ |
| ಗೌಂ | ನೇತ್ರತ್ರಯಾಯ | ವೌಷಟ್ |
| ಗಃ | ಅಸ್ತ್ರಾಯ | ಫಟ್ |

ಅನಂತರ ಪ್ರಾಣಾಯಾಮ ಮಾಡಿ ಗಣೇಶನನ್ನು ಧ್ಯಾನಿಸಬೇಕು.

ಧ್ಯಾನಮ್ :—

ಸಿಂದೂರಾಭಂ ತ್ರಿನೇತ್ರಂ ಪೃಥುತರಜಠರಂ
ಹಸ್ತಪದ್ಮೈರ್ದಧಾನಮ್ ।
ಖಂಗಂ ಪಾಶಾಂಕುಶೇಷ್ಟಾನ್ಯುರುಕರವಿಲಸದ್ವಾರುಣೀ
ಪೂರ್ಣಕುಂಭಮ್ ॥
ಬಾಲೇಂದೂದ್ದೀಪ್ತಮೌಲಿಂ ಕರಿಪತಿವದನಂ
ಬೀಜಪೂರಾರ್ದ್ರಗಂಡಮ್ ।
ಭೋಗೀಂದ್ರಾಬದ್ಧಭೂಷಂ ಭಜತ ಗಣಪತಿಂ
ರಕ್ತವಸ್ತ್ರಾಂಗರಾಗಮ್ ॥

ಕುಂಕುಮದಂತೆ ಕೆಂಪಾಗಿರುವ, ಮೂರುಕಣ್ಣುಗಳುಳ್ಳ, ದೊಡ್ಡ ಹೊಟ್ಟೆಯ, ಕೆಂಪುವಸ್ತ್ರ ಧಾರಿಯಾದ, ಸರ್ಪಗಳಿಂದ ವಿಭೂಷಿತನಾದ ಸಿರಸ್ಸಿನಲ್ಲಿ ಬಾಲಚಂದ್ರನಿರುವ, ಆನೆಯಂತೆ ಸಿರಸ್ಸುಳ್ಳ, ಮದಪ್ರವಾಹ ದಿಂದ ಸಿಕ್ತವಾಗಿರುವ ಕಪೋಲಗಳುಳ್ಳ, ಕೈಗಳಲ್ಲಿ ಖಂಗ, ಪಾಶ, ಅಂಕುಶ ಮತ್ತು ಮದ್ಯತುಂಬಿದ ಪಾತ್ರೆಯುಳ್ಳ ಗಣಪತಿಯನ್ನು ಧ್ಯಾನಿಸಬೇಕು.

ಗಣೇಶನನ್ನು ಮನಸ್ಸಿನಲ್ಲಿ ಧ್ಯಾನಿಸಿ, ಗಂಧಪುಷ್ಪಗಳಿಂದ ಗಣಪತಿಯ ಪೀಠದಲ್ಲಿರುವ ತೀವ್ರಾ, ಜ್ವಾಲಿನೀ, ನಂದಾ, ಭೋಗದಾ ಕಾಮರೂಪಿಣೀ, ಉಗ್ರಾ, ತೇಜಸ್ವಿನೀ, ಸತ್ಯಾ ಮತ್ತು ವಿಘ್ನವಿನಾಶಿನೀ ಎಂಬ ಶಕ್ತಿಗಳನ್ನು ಪೂಜಿಸಬೇಕು. ಇವರನ್ನು ಪೂಜಿಸಿದ ಅನಂತರ ಗಣೇಶನಿಗೆ ಪಂಚತತ್ತ್ವ ಅಂದರೆ ಪಂಚ ಮಕಾರಗಳನ್ನು (ಮದ್ಯ ಮಾಂಸ, ಮತ್ಸ್ಯ, ಮುದ್ರಾ ಮತ್ತು ಮೈಥುನ (ಸ್ತ್ರೀ) ಅರ್ಪಿಸಿ ಅನಂತರ ಅವನ ನಾಲ್ಕುಕಡೆಯಿರುವ ಗಣನಾಯಕ, ಗಣನಾಥ ಗಣಕ್ರೀಡ, ಏಕದಂತ, ರಕ್ತಸುಂಡ, ಲಂಬೋದರ, ಗಜಾನನ ಮಹೋದರ, ವಿಕಟ, ಧೂಮ್ರಾಭ ಮತ್ತು ವಿಘ್ನನಾಶನ ಎಂಬ ವಿಭೂತಿ ಗಳನ್ನು ಪೂಜಿಸಬೇಕು. ಅನಂತರ ಬ್ರಾಹ್ಮೀ ಆದಿಯಾಗಿ ಎಂಟು ಶಕ್ತಿಯರ ಮತ್ತು ದಿಕ್ಪಾಲಕರ ಪೂಜೆಯನ್ನು ಮಾಡಿ ವಿಘ್ನರಾಜ ಕ್ಷಮಸ್ವ ಎಂದು ವಿಸರ್ಜಿಸಬೇಕು.

ಮನೆಯನ್ನು ಕಟ್ಟುವಾಗ ಬಾವಿಯನ್ನು ತೆಗೆಸುವ ಇತ್ಯಾದಿ ಶುಭಕಾರ್ಯಗಳಲ್ಲಿ ಮಾಡುವ ಗಣಪತಿಯ ಪೂಜಾ ವಿಧಾನಗಳಿವೆ. ಆ ಸಮಯಗಳಲ್ಲಿ ಈ ಧ್ಯಾನವನ್ನು ಹೇಳಿದೆ.

ಬಂಧೂಕಾಮಂ ತ್ರಿನೇತ್ರಂ ದ್ವಿರದವರಮುಖಂ
ನಾಗಯಜ್ಞೋಪವೀತಮ್ ।
ಶಂಖಂ ಚಕ್ರಂ ಕೃಪಾಣಂ ವಿಮಲಸರಸಿಜಂ
ಹಸ್ತಪದ್ಮೈರ್ದಧಾನಮ್ ॥
ಉದ್ಯದ್ಬಾಲೇಂದುಮೌಲಿಂ ದಿನಕರಕಿರಣೋದ್ದೀಪ್ತ
ವಸ್ತ್ರಾಂಗಶೋಭಮ್ ।
ನಾನಾಲಂಕಾರಯುಕ್ತಂ ಭಜತ ಗಣಪತಿಂ
ರಕ್ತಪದ್ಮೋಪವಿಷ್ಟಮ್ ॥

ಕೆಂಪು ಕಮಲದಲ್ಲಿ ಕುಳಿತಿರುವ, ಕೆಂಪುಬಣ್ಣದ, ಮೂರು ಕಣ್ಣುಗಳುಳ್ಳ, ಆನೆಯಂತೆ ಮುಖವುಳ್ಳ, ಸರ್ಪವನ್ನೇ ಯಜ್ಞೋಪವೀತ ವನ್ನಾಗಿ ಧರಿಸಿರುವ, ಹಣೆಯಲ್ಲಿ ಬಾಲಚಂದ್ರನಿರುವ, ಸೂರ್ಯನ ಕಿರಣ ದಂತೆ ದೇದೀಪ್ಯಮಾನವಾದ ವಸ್ತ್ರವನ್ನು ಧರಿಸಿರುವ, ಕೈಯಲ್ಲಿ ಶಂಖ ಚಕ್ರ, ಕೃಪಾಣ ಮತ್ತು ಕಮಲವುಳ್ಳ ಗಣಪತಿಯನ್ನು ಧ್ಯಾನಿಸಬೇಕು.

ಗಣಪತಿಯನ್ನು ಪೂಜಿಸಿದ ಅನಂತರ ಶಕ್ತಿಯರನ್ನು ಪೂಜಿಸ ಬೇಕೆಂದು ಇಲ್ಲಿಯೂ ಹೇಳಿದೆ. ಗಣಪತಿ ಮತ್ತು ಈ ಶಕ್ತಿಯರ ಸಂಬಂ ಧವು ತಂತ್ರಾಚಾರದಲ್ಲಿ ವಿಶೇಷ ರೂಪವನ್ನು ಪಡೆದಿದೆ. ಕೆಲವು ಸ್ಥಳ ಗಳಲ್ಲಿ ಶಕ್ತಿಸಹಿತ ಗಣಪತಿಯ ವಿಗ್ರಹಗಳು ಸಿಕ್ಕಿವೆ. ಗಣಪತಿಯ ಎಡ ಭಾಗದಲ್ಲಿ ಶಕ್ತಿಯರಿರುತ್ತಾರೆ. ಈ ದೇವಿಯರನ್ನು ಮಾತೃಕೆಯರೆಂದು ಕರೆಯುತ್ತಾರೆ. ವ್ಯಾಕರಣದ ಅನುಸಾರ ಮಾತಾ ಇವ ಅಂದರೆ ತಾಯಿ ಯಂತೆ ಎಂದಾಗುತ್ತದೆ. ಇವರು ಸ್ವಭಾವತಃ ಕ್ರೂರಿಗಳೇ ಆದರೂ ಪೂಜಿಸಿ ತುಷ್ಟರನ್ನಾಗಿಮಾಡಿದರೆ ತಾಯಿಯಂತೆ ಕಾಪಾಡುತ್ತಾರೆ. ಗಣೇಶ ಮತ್ತು ಮಾತೃಕೆಯರು ಒಂದೇ ಸ್ವಭಾವದವರು. ವಿಶೇಷವಾಗಿ ಇವರುಗಳನ್ನು ಮಕ್ಕಳ ರಕ್ಷಣೆಗಾಗಿ ಪೂಜಿಸುತ್ತಾರೆ. ವಾರಾಹ ಪುರಾಣ ದಲ್ಲಿ ಅವರ ಜನ್ಮದ ವಿಷಯವಾಗಿ ಒಂದು ಕಥೆ ಇದೆ.

ಒಂದುಸಾರಿ ಅಂಧಕಾಸುರನಿಗೂ ದೇವತೆಗಳಿಗೂ ಘೋರಯುದ್ಧ ವಾಯಿತು. ಆ ರಾಕ್ಷಸನ ಒಂದುತೊಟ್ಟು ರಕ್ತ ಬಿದ್ದರೆ ಅದರಿಂದ ಅವನಷ್ಟೇ ಬಲಶಾಲಿಗಳಾದ ರಾಕ್ಷಸರು ಹುಟ್ಟುತ್ತಿದ್ದರು. ಅವನನ್ನು ಕೊಲ್ಲಲು ಕಷ್ಟವಾಯಿತು. ಯುದ್ಧಮಾಡುತ್ತಿದ್ದ ಶಂಕರನ ಮುಖದಿಂದ ಅಗ್ನಿಜ್ವಾಲೆ ಹೊರಟಿತು. ಅದು ದೇವಿಯ ರೂಪವನ್ನು ಧರಿಸಿತು. ಅವಳೇ ಯೋಗೇಶ್ವರಿ. ಈರೀತಿಯಾಗಿ ರುದ್ರ, ಇಂದ್ರ, ವಿಷ್ಣು ಇತ್ಯಾದಿ ದೇವತೆಗಳ ತೇಜಸ್ಸಿನಿಂದ ಮಾಹೇಶ್ವರೀ, ವೈಷ್ಣವೀ, ಬ್ರಾಹ್ಮೀ, ಕೌಮಾರೀ ಇಂದ್ರಾಣೀ, ದಂಡಧಾರಿಣೀ ಮತ್ತು ವಾರಾಹಿಣೀ ಆದಿ ದೇವಿಯರು ಹುಟ್ಟಿದರು. ಇವರ ಸಹಾಯದಿಂದ ಅಂಧಕಾಸುರನ್ನು ಕೊಂದರು.

ಈ ಮಾತೃಕೆಯರು ಮನುಷ್ಯರ ಅಂತಃಕರಣದ ದುಷ್ಪ್ರವೃತ್ತಿ ಗಳಿಗೆ ಅಧಿಷ್ಠಾತೃ ದೇವಿಯರೆಂದು ಹೇಳಲಾಗಿದೆ. ಕಾಮಕ್ಕೆ ಯೋಗೇ ಶ್ವರೀ, ಮಾಹೇಶ್ವರೀ ಕ್ರೋಧಕ್ಕೆ, ಲೋಭಕ್ಕೆ ವೈಷ್ಣವೀ, ಮದಕ್ಕೆ ಬ್ರಾಹ್ಮೀ ಮೋಹಕ್ಕೆ ಕೌಮಾರೀ, ಮಾತ್ಸರ್ಯಕ್ಕೆ ಐಂದ್ರೀ, ಪೈಶುನ್ಯಕ್ಕೆ ದಂಡಧಾರೀ ಮತ್ತು ಅಸೂಯೆಗೆ ವಾರಾಹೀ ಎಂದುಹೇಳಿದೆ. ಕೆಲವು ಕಡೆ ದಂಡ ಧಾರಿಗೆ ಬದಲಾಗಿ ಚಾಮುಂಡೀ ಮತ್ತು ಐಂದ್ರಿಗೆ ಬದಲಾಗಿ ಅಪರಾಜಿತೆ ಯರ ಹೆಸರುಗಳು ಬಂದಿವೆ. 'ಶಾರದಾ ತಿಲಕದಲ್ಲಿ' ವ್ಯಾಪಿನೀ, ತಾಪಿನೀ, ಪಾವಿನೀ, ಕ್ಲೇದಿನೀ, ಧಾರಿಣೀ, ಮಾಲಿನೀ, ಹಂಸಿನೀ, ಶಂಖಿನೀ ಹಾಗು ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಾಮುಂಡಾ ಮತ್ತು ಮಹಾಲಕ್ಷ್ಮಿಯರ ಹೆಸರುಗಳ ಉಲ್ಲೇಖವಿದೆ. ಇವರು ಮಾತೃಕೆಯರೆಂದು ಹೇಳಿದೆ.

ಶಾರದಾತಿಲಕದ ಹದಿಮೂರನೇ ಪಟಲದಲ್ಲಿ ವಿಸ್ತಾರವಾಗಿ ಗಣೇಶನನ್ನು ಅನೇಕವಿಧವಾದ ಜಪ, ಧ್ಯಾನ ಮತ್ತು ಹೋಮಗಳಿಂದ ಪೂಜಿಸಬೇಕೆಂದು ಹೇಳಿದೆ. ಪಟಲದ ಅಂತ್ಯದಲ್ಲಿ ಒಂದು ಸ್ತೋತ್ರವಿದೆ. ಅದರ ಕೆಲವು ಶ್ಲೋಕಗಳನ್ನು ಇಲ್ಲಿ ಉದಾಹರಿಸುತ್ತೇವೆ:—

ಕೃತಾಂಗರಾಗಂ ನವಕುಂಕುಮೇನ
ಮತ್ತಾಲಿಮಾಲಾಂ ಮದಪಂಕಲಗ್ನಾಮ್ ।
ನಿವಾರಯಂತಃ ನಿಜಕರ್ಣತಾಲೈಃ
ಕೋ ವಿಸ್ಮರೇತ್ಪುತ್ರಮನಂಗಶತ್ರೋಃ ॥
ತ್ವಯಾ ಸಮುದ್ಧೃತ್ಯ ಗಜಾಸ್ಯಹಸ್ತ
ಯೇ ಸೀಕರಾ ಪುಷ್ಕರರಂಧ್ರಮುಕ್ತಾಃ ।
ವ್ಯೋಮಾಂಗಣೆ ತೇ ವಿಚರಂತಿ ತಾರಾಃ
ಕಾಲಾತ್ಮನಾ ಮೌಕ್ತಿಕತುಲ್ಯಭಾಸಾಃ ॥
ಕ್ರೀಡಾರತೇ ವಾರಿನಿಧೌ ಗಜಾಸ್ಯೇ
ವೇಲಾಮತಿ ಕ್ರಾಮತಿ ವಾರಿಪೂರೆ ।
ಕಲ್ಪಾವಸಾನಂ ಪ್ರವಿಚಿಂತ್ಯ ದೇವಾಃ
ಕೈಲಾಸನಾಥಂ ಸ್ತುತಿಭಿಃ ಸ್ತುವಂತಿ ॥
ಪದಂ ಸ್ತುತೀನಾಮುಪದಂ ಶ್ರುತೀನಾಂ
ಲೀಲಾವತಾರಂ ಪರಮಷ್ಟಮೂರ್ತೇಃ ।
ನಾಗಾತ್ಮಕೋ ವಾ ಪುರುಷಾತ್ಮಕೋ ವೇ-
ತ್ಯಭೇದ್ಯಮಾದ್ಯಂ ಭಜ ವಿಘ್ನರಾಜಮ್ ॥
ವೇದಾಂತಗೀತಂ ಪುರುಷಂ ಭಜೇಹಮಾ
ತ್ಮಾನಮಾನಂದಘನಂ ಹೃದಿಸ್ಥಮ್ ।
ಗಜಾನನಂ ಯನ್ಮಹಸಾಜನಾನಾಂ
ಮಹಾಂಧಕಾರೋ ವಿಲಯಂ ಪ್ರಯಾತಿ ॥

ಮದನವೈರಿಸುತನಾದ ಗಣಪತಿಯನ್ನು ಯಾರುತಾನೆ ಮರೆಯಲು ಸಾಧ್ಯ? ಅವನು ಕುಂಕುಮದಿಂದ ಅಲಂಕೃತನಾಗಿದ್ದಾನೆ. ಗಂಡಸ್ಥಲದಿಂದ ಹರಿಯುತ್ತಿರುವ ಮದೋದಕಕ್ಕೆ ಭ್ರಮರುಗಳು ಮುತ್ತಿಕೊಂಡಿವೆ. ಅವುಗಳನ್ನು ತನ್ನ ಕಿವಿಗಳಿಂದ ಓಡಿಸುತ್ತಿದ್ದಾನೆ. ಹೆ ಗಜವದನ! ನೀನು ಸೊಂಡಲಿನಿಂದ ನೀರನ್ನು ಆಕಾಶಕ್ಕೆ ಎರಚಿದೆ ಮೇಲೆ ಹಾರಿದ ನೀರಿನ ಹನಿಗಳು ಮುತ್ತುಗಳಂತೆ ನಕ್ಷತ್ರಗಳಾಗಿವೆ.

ಗಣೇಶನು ಸಮುದ್ರದಲ್ಲಿ ಜಲಕ್ರೀಡೆಯಾಡುತ್ತಿದ್ದರೆ ದೊಡ್ಡದೊಡ್ಡ ಅಲೆಗಳು ಏಳುತ್ತಲಿವೆ; ಅವುಗಳನ್ನು ನೋಡಿದ ದೇವತೆಗಳು ಪ್ರಳಯ ಸಮೀಪಿಸಿತೆಂದು ಶಿವನನ್ನು ಸ್ತುತಿಸುತ್ತಾರೆ. ಸ್ತುತಿಗಳಿಗೆ ಆಶ್ರಯ ನಾದ, ವೇದಾತೀತನಾದ, ಅಷ್ಟತನು ಶಂಕರನ ಲೀಲಾಮೂರ್ತಿಯಾದ ಆದಿಪುರುಷನಾದ, ಗಜರೂಪನೋ ಅಥವಾ ಪುರುಷರೂಪನೋ ಎಂಬು ದನ್ನು ತಿಳಿಯಲಾಗದ ಗಣಪತಿಯನ್ನು ಪೂಜಿಸಬೇಕು. ಯಾವನನ್ನು ವೇದಾಂತವು ಪುರುಷನೆಂದು ಹಾಡುತ್ತಿದೆಯೋ ಯಾವನು, ಹೃದಯದ ಆನಂದಘನ ಆತ್ಮನಾಗಿರುವನೋ, ಯಾರ ತೇಜಸ್ಸಿನಿಂದ ಮನುಷ್ಯನ ಅಂಧಕಾರವು ದೂರವಾಗುವುದೊ, ಆ ಗಣಪತಿಯನ್ನು ಪೂಜಿಸುತ್ತೇನೆ. ಯಜ್ಞ ಮತ್ತು ತಪಸ್ಸಿನ ಜೊತೆಯಲ್ಲಿ ಈ ಸ್ತೋತ್ರವನ್ನು ಮಾಡಿದವನಿಗೆ ಸಮಸ್ತ ನಿಧಿಗಳೂ ಪ್ರಾಪ್ತವಾಗುತ್ತವೆ. ಇದೇ ಶಾರದಾತಿಲಕದ ಎಂಟನೇ ಪಟಲದಲ್ಲಿ ಶಿವನ ಪೂಜಾವಿಧಿಯನ್ನು ಹೇಳಿದೆ. ಅಲ್ಲಿ ಗಣೇಶನನ್ನು ಶ್ಯಾಮಲವರ್ಣದವನೆಂದು ಹೇಳಿದೆ. ಹಿಂದೆ ಸಿಂದೂರಾಭನೆಂದು ವರ್ಣಿತನಾಗಿದ್ದಾನೆ.

ಇಲ್ಲಿನವರೆವಿಗೆ ಗಣೇಶನ ಪೂಜಾ ವಿಧಾನಗಳನ್ನು ಹೇಳಿದ್ದಾ ಯಿತು. ಅವುಗಳಲ್ಲಿ ವಿಶೇಷವೇನಿಲ್ಲ. ಆದರೆ ತಂತ್ರದ ವಾಮಮಾರ್ಗ ಪದ್ಧತಿಯಲ್ಲಿ ಹೇಳಿರುವ ವಿಧಾನಗಳು ಬುದ್ಧಿಗೆ ಸ್ವಲ್ಪ ಕಷ್ಟಸಾಧ್ಯಗಳೆ. ಹಿಂದೆ ಮಹಾನಿರ್ವಾಣ ತಂತ್ರದಲ್ಲಿ ಪಂಚ 'ಮ' ಕಾರಗಳನ್ನು ಹೇಳಿದೆ. ಸಾಮಾನ್ಯವಾಗಿ ಆ ವಿಧಾನವು ಮನಸ್ಸಿಗೆ ಹಿಡಿಸುವುದಿಲ್ಲ. ಅದರಲ್ಲೂ ಮೈಥುನ (ಸ್ತ್ರೀ) ವಿಚಾರವು ಭಯವನ್ನುಂಟುಮಾಡುವುದಾಗಿದೆ. ಆದರೆ ತಂತ್ರದ ಶೈಲಿಯೇ ಹಾಗೆ. ಹಿಂದೆ ಶಾರದಾತಿಲಕದ ಕೆಲವು ಶ್ಲೋಕ ಗಳನ್ನು ಉದಾಹರಿಸಲಾಗಿದೆ. ಉಳಿದವುಗಳು ಅಶ್ಲೀಲಗಳೆಂದು ಬಿಡ ಲಾಗಿದೆ. ಉದಾಹರಣೆಗಾಗಿ ಒಂದನ್ನು ಮಾತ್ರ ಹೇಳುತ್ತೇವೆ. ಹೇಳಲೇ ಬೇಕೆಂಬ ಹಠವೇನೂ ಇಲ್ಲ. ಆದರೆ ಅದರ ಭಾವಾನುವಾದವನ್ನು ನೋಡಬಹುದು :—

ಸಿಂದೂರಾಭನಿಭಾನನಂ ತ್ರಿನಯನಂ ಹಸ್ತೇಷು
ಪಾಶಾಂಕುಶೌ
ಬಿಭ್ರಾಣಂ ಮಧುಮತ್ಕಪಾಲಮನಿಶಂ
ಸಾರ್ದ್ಧೇಂದುಮೌಲಿಂ ಭಜೇತ್ ।
ಪುಷ್ಟ್ಯಾಶ್ಲಿಷ್ಟತನುಂ ಧ್ವಜಾಗ್ರಕರಯಾ
ಪದ್ಮೋಲ್ಲಸತ್‌ಹಸ್ತಯಾ
ತದ್ಯೋನ್ಯಾಹಿತ ಪಾಣಿಮಾತ್ತವ
ಸುಮತ್ಪಾತ್ರೋಲ್ಲಸತ್ಪುಷ್ಕರಮ್ ॥

ಇದು ಪುಷ್ಕರ ಗಣಪತಿಯ ಧ್ಯಾನವಾಗಿದೆ. ಕುಂಕುಮ ವರ್ಣದ ಸೊಂಡಿಲುಳ್ಳ, ತ್ರಿನೇತ್ರವುಳ್ಳ, ಅವನ ಮೂರು ಕೈಗಳಲ್ಲಿ ಪಾಶ, ಅಂಕುಶ, ಮತ್ತು ಮದ್ಯಪಾತ್ರೆಯುಳ್ಳ ಗಣಪತಿಯನ್ನು ಪುಷ್ಟೀ ಎಂಬ ಶಕ್ತಿಯು ಆಲಂಗಿಸಿಕೊಂಡಿದ್ದಾಳೆ. ಅವಳ ಎರಡು ಕೈಗಳಲ್ಲಿ ಕಮಲಗಳಿವೆ. ಒಂದು ಗಣೇಶನ ಕೊರಳನ್ನು ಸುತ್ತಿಕೊಂಡಿದೆ. ಮತ್ತೊಂದು ಕೈ ಗಣೇಶನ ಗುಹ್ಯಾಂಗದ ಮೇಲಿದೆ. ಗಣೇಶನ ನಾಲ್ಕನೇ ಹಸ್ತವು ಪುಷ್ಟಿಯ ಗುಹ್ಯಾಂಗದ ಮೇಲಿದೆ. ಈ ಧ್ಯಾನದಲ್ಲಿ ಗಣೇಶನೊಡನೆ ಪುಷ್ಟಿಯ ಉಲ್ಲೇಖವಿದೆ. ಬೇರೆ ಬೇರೆ ಶಕ್ತಿಗಳು ಬೇರೆ ಬೇರೆ ಧ್ಯಾನಗಳಲ್ಲಿ ಇರುವುದನ್ನು ನೋಡುತ್ತೇವೆ. ಈರೀತಿಯಾಗಿ ಗಣೇಶ ಅಥವಾ ಮಹಾ ಗಣಪತಿಯ ಭೇದಗಳು ಅನೇಕವಾಗಿವೆ. ಶಾರದಾತಿಲಕದ ರೀತಿಯಾಗಿ ೨೪, ೫೫ ಮತ್ತು ೪೪೦ ಗಣಪತಿಯ ಭೇದಗಳಿವೆ. ಇವುಗಳಲ್ಲಿ ಪ್ರಧಾನ ಭೇದಗಳ ಹೆಸರು ಬಹಳವಾಗಿವೆ. ಇದರಲ್ಲಿ ಮಹಾಗಣಾಧಿಪತಿ, ಕುಮಾರ ಗಣಪತಿ, ಹೇರಂಬಸುತ, ನವನೀತ, ಸ್ವರ್ಣ ಮತ್ತು ಸಂತಾನ ಎಂದು ಹೇಳಿದೆ. ಮೇಲಿನ ಹೆಸರುಗಳ ಜೊತೆಯಲ್ಲಿ ಹರಿದ್ರಾಗಣಪತಿ ಉಚ್ಛಿಷ್ಟಗಣಪತಿ, ಊರ್ಧ್ವಗಣಪತಿ, ಲಕ್ಷ್ಮೀಗಣಪತಿ ಮತ್ತು ಪಿಂಗಲ ಗಣಪತಿ ಎಂಬ ಹೆಸರುಗಳೂ ಬಂದಿವೆ. ಇವಲ್ಲದೆ ಶಾರದಾತಿಲಕದಲ್ಲಿ ವಿಧಿ, ಪುಷ್ಕರ, ಹೇರಂಬ, ಶಕ್ತಿ ಮತ್ತು ಸುಬ್ರಹ್ಮಣ್ಯಾದಿಗಳ ಪೂಜೆಯನ್ನೂ ಸಹ ಹೇಳಿದೆ.

ಶಕ್ತಿಸಹಿತ ಗಣಪತಿಯ ಮೂರ್ತಿಗಳು ಬಹಳ ಸಿಕ್ಕುತ್ತವೆ. ಸಾಮಾನ್ಯವಾಗಿ ಅಶ್ಲೀಲವೆಂದು ಕರೆಯುವ ಭಂಗಿಯಲ್ಲಿಯೇ ಉಚ್ಛಿಷ್ಟ ಗಣಪತಿಗಳು ಸಿಕ್ಕುತ್ತವೆ. ಅದರಲ್ಲಿ ಗಣಪತಿ ಮತ್ತು ಶಕ್ತಿಯರಿಬ್ಬರೂ ನಗ್ನರಾಗಿಯೇ ಇರುತ್ತಾರೆ. ಮೇಲೆ ಹೇಳಿದ ಪುಷ್ಕರ ಗಣಪತಿಯೂ ಸಹ ಇದರ ಒಂದು ಭಾಗವೆಂದು ತಿಳಿಯಬೇಕು. ರಾವ್ ಅವರ ಎಲಿಮೆಂಟ್ಸ್ ಆಫ್ ಹಿಂದು ಇಕನೋಗ್ರಫಿ (Eliments of Hindu Econography) ಯಲ್ಲಿ ಒಂದು ಅಶ್ಲೀಲ ಚಿತ್ರವಿದೆ. ಪ್ರಯಾಗದ ಪುರ ಸಭೆಯ ವಸ್ತುಸಂಗ್ರಹಾಲಯದಲ್ಲಿ ಗಣೇಶ ಮತ್ತು ಶಕ್ತಿಯರ ಕಪ್ಪು ವರ್ಣದ ಪ್ರತಿಮೆ ಇದೆ. ಉಚ್ಛಿಷ್ಟ ಎಂದರೆ ಎಂಜಲೆಂದರ್ಥ. ಶರೀರದ ಅಪವಿತ್ರ ಸ್ಥಳದಲ್ಲಿ ಧ್ಯಾನಿಸಬೇಕಾದುದರಿಂದ ಇದನ್ನು ಉಚ್ಛಿಷ್ಟವೆಂದು ಕರೆಯುತ್ತಾರೆ ಎಂದು ಕೆಲವರ ಅಭಿಪ್ರಾಯ.

ಗಣೇಶನ ಭಿನ್ನ ಭಿನ್ನ ವಿಗ್ರಹಗಳಲ್ಲಿ ಬೇರೆ ಬೇರೆ ಆಯುಧಗಳಿವೆ.




೧ ಖೇಟಕ, ೨ ಅಂಕುಶ, ೩ ಪಾಶ, ೪ ಮುದ್ಗರ, ೫ ಖಟ್ವಾಂಗ, ೬ ಪರಶು, ೭ ಶೂಲ

ಈ ವಿಶೇಶ ವಿಗ್ರಹಗಳ ಪೂಜಾ ಸ್ವರೂಪಗಳನ್ನು ತಿಳಿಯಲು ಈ ಒಂದು ಉದಾಹರಣೆ ಸಾಕು. ಮಹಾಗಣಪತಿಯ ಮಂತ್ರ :—

ಶ್ರೀ ಶಕ್ತಿಸ್ಮರಭೂವಿಘ್ನ ಬೀಜಾನಿ ಪ್ರಥಮಂ ವದೇತ್ ।
ಙೇಂತಂ ಗಣಪತಿಂ ಪಶ್ಚಾತ್ ವರಾಂತೆ ವರದಂ ಪದವ್ ॥
ಉಕ್ತಾ ಸರ್ವಜನಂ ಮೇನ್ತೆ ವಶಮಾನಯ ತು ದ್ವಯವ್ ।
ಅಷ್ಟಾವಿಂಶತ್ಯಕ್ಷರೋಯಂ ತಾರಾದ್ಯೋ ಮನುರೀರಿತಃ ॥

ಮೊದಲು ಶ್ರೀ ಶಕ್ತಿ ಕಾಮದೇವ, ಭೂಮಿ ಮತ್ತು ವಿಘ್ನಗಳ ಬೀಜಗಳನ್ನು ಉಚ್ಚರಿಸಬೇಕು. ಙೇಂತ ಗಣಪತಿ ಆನಂತರ ವರ ಮತ್ತು ವರದ ಅಂತ್ಯದಲ್ಲಿ ವರದ ಪದವನ್ನು ಹೇಳಿ ಸರ್ವಜನಂ 'ಮೇ'ಯ ಆನಂತರ ಎರಡು ಸಾರಿ 'ವಶಮಾನಯ' ವನ್ನು ಹೇಳಬೇಕು. ಈ ವಾಕ್ಯಗಳಿಗೆ ಅರ್ಥವನ್ನು ಹೇಳುವುದು ಕಠಿಣ. ತಾರ ಅಂದರೆ ಪ್ರಣವ. ಙೇಂತಗಣಪತಿ ಅಂದರೆ ಚತುರ್ಥಿ ವಿಭಕ್ತಿಯಲ್ಲಿ 'ಗಣಪತಯೆ' ಎಂದಾಗುತ್ತದೆ. ಅಂತ್ಯದಲ್ಲಿ ಸರ್ವಜನಂ ವಶಮಾನಯ ವಶಮಾನಯ ಎಂದು ಹೇಳಬೇಕು. ತಂತ್ರಾಭಿದಾನದಂತೆ ಶ್ರೀ ಆದಿಗಳ ಬೀಜಮಂತ್ರ:—

| | |
|---|---|
| ಶ್ರೀ—ಖ, ಶ್ರೀಂ, ಢ | ಭೂಮಿ—ಬ, ಭ, ಭೂ, ಲ |
| ಶಕ್ತಿ—ಎ, ತ, ಸ, ಸೌಃ, ಹ್ರೀಂ | ವಿಘ್ನ—ಗಂ |
| ಸ್ಮರ—ಇ, ಈ, ಕ್ಲೀಂ. ಜ, ರ, ಕ್ಷ | ವರ—ದ |

ವರದ—ಥ, ದ *

ಈ ಮಂತ್ರದಲ್ಲಿ ಯಾವ ಬೀಜಾಕ್ಷರವನ್ನು ತೆಗೆದುಕೊಳ್ಳಬೇಕೆಂಬ ಸಂಶಯ ಬರುತ್ತದೆ. ಒಂದುರೀತಿ ಓಂ, ಶ್ರೀಂ, ಕ್ಲೀಂ, ಲ, ಗಂ ಗಣಪತಯೆ ದ, ಥ ಸರ್ವಜನಂ ಮೆ ವಶಮಾನಯ. ಆದರೆ ಮೇಲಿನ

* ಶ್ರೀ ಪಂಚಾನನ ಭಟ್ಟಾಚಾರ್ಯರಿಂದ ಸಂಪಾದಿತ ತಂತ್ರಾಭಿದಾನ ಮತ್ತು ದಕ್ಷಿಣಾಮೂರ್ತಿಕೃತ ಉದ್ಧಾರ ಕೋಶದಂತೆ.

ಶ್ಲೋಕದಲ್ಲಿ ಈ ಸಂಕೇತವಿಲ್ಲ. ದೀಕ್ಷಾ ಸಮಯದಲ್ಲಿ ಗುರುಮುಖದಿಂದ ಮಂತ್ರದ ನಿಜಸ್ವರೂಪವನ್ನು ತಿಳಿಯಬಹುದು.

ಹಿಂದೆ ನಾವು ಗಣೇಶನ ಬೀಜಮಂತ್ರ "ಗಂ" ಎಂದು ಹೇಳಿದ್ದೇವೆ. ಆದರೆ ಅದು ಒಂದೇ ಅಲ್ಲ. ಗಜಾನನ, ಗಣನಾಥ, ಗಣನಾಯಕ, ಗಣಪತಿ, ಗಣೇಶ, ಗಣೇಶ್ವರ ಈ ಹೆಸರುಗಳಿಗೆ ಬೇರೆ ಬೇರೆ ಬೀಜಾಕ್ಷರಗಳಿವೆ. ತಂತ್ರ ಗ್ರಂಥಗಳಲ್ಲಿ ಇವುಗಳಿಗೆ ಬೇರೆ ಬೇರೆ ಪ್ರಯೋಗವಿದೆ. ಸಂಪ್ರದಾಯಸ್ಥರು ಮಾತ್ರ ಯಥಾಕ್ರಮವಾಗಿ ಉಪಯೋಗಿಸುತ್ತಾರೆ. ಮಹಾಗಣಪತಿಯ ಧ್ಯಾನ :—

ನವರತ್ನಮಯಂ ದ್ವೀಪಂ ಸ್ಮರೇದಿಕ್ಷುರಸಾಂಬುಧೌ ।
ತದ್ವೀಚಿಧೌತಪರ್ಯಂತಂ ಮಂದಮಾರುತಸೇವಿತಮ್ ॥
ಮಂದಾರಪಾರಿಜಾತಾದಿ ಕಲ್ಪವೃಕ್ಷಲತಾಕುಲಮ್ ।
ಉದ್ಭೂತರತ್ನಛಾಯಾಭಿರರುಣೀಕೃತ ಭೂತಲಮ್ ॥

ಉದ್ಯದ್ದಿನಕರೇಂದುಭ್ಯಾಮುದ್ಭಾಷಿತ ದಿಗಂತರಮ್ ।
ತಸ್ಯ ಮಧ್ಯೆ ಪಾರಿಜಾತಂ ನವರತ್ನಮಯಂ ಸ್ಮರೇತ್ ॥
ಋತುಭಿಸ್ಸೇವಿತಂ ಷಡ್ಭಿರನಿಶಂ ಪ್ರೀತಿವರ್ಧನಮ್ ।
ತಸ್ಯಾಧಸ್ತಾನ್ಮಹಾಪೀಠೆ ರಚಿತೆ ಮಾತೃಕಾಂಬುಜೆ ॥

ಷಟ್ಕೋಣಾಂತಸ್ತ್ರಿಕೋಣಸ್ಥಂ ಮಹಾಗಣಪತಿಂ ಸ್ಮರೇತ್ ।
ಹಸ್ತೀಂದ್ರಾನನಮಿಂದುಚೂಡಾಮರುಣಚ್ಛಾಯಾಂ ತ್ರಿನೇತ್ರಂ ರಸಾ।
ದಾಶ್ಲಿಷ್ಟಂ ಪ್ರಿಯಯಾ ಸಪದ್ಮಕರಯಾ ಸ್ವಾಂಕಸ್ಥಯಾ ಸಂತತಮ್ ॥
ಬೀಜಾಪೂರಗದಾಧನುಸ್ತ್ರಿಶಿಖಯುಕ್ ಚಕ್ರಾಂಬು ಪಾಶೋತ್ಪಲಮ್ ।
ವ್ರೀಹ್ಯಗ್ರಂ ಸ್ವವಿಶಾಣ ಗಂಡಕಳಸಾನ್ ಹಸ್ತೈರ್ವಹಂತಂ ಭಜೆ ॥

ಸಾಧಕನು ತನ್ನ ಮೂರ್ಧ್ನಿಯಲ್ಲಿ ಇಕ್ಷುರಸಾಬ್ಧಿ (ಕಬ್ಬಿನ ರಸದ ಸಮುದ್ರ) ಮಧ್ಯದಲ್ಲಿ ನವರತ್ನಮಯ ದ್ವೀಪವನ್ನು ಕಲ್ಪಿಸಿಕೊಳ್ಳಬೇಕು. ಅಲ್ಲಿ ಮಂದಮಾರುತ ಬೀಸುತ್ತಿರುತ್ತದೆ. ಮಂದಾರ, ಪಾರಿಜಾತ ಮತ್ತು ಕಲ್ಪವೃಕ್ಷಾದಿ ವೃಕ್ಷಗಳು ಬೆಳೆದಿರುತ್ತವೆ. ಲತೆಗಳು ಹಬ್ಬಿವೆ. ರತ್ನಗಳ ಪ್ರಭೆಯಿಂದ ಭೂಮಿಯು ಕೆಂಪಾಗಿದೆ. ಸೂರ್ಯ ಮತ್ತು ಚಂದ್ರರ ಪ್ರಕಾಶದಿಂದ ಆಕಾಶವು ಬೆಳಗುತ್ತಿದೆ. ಸಾಲಂಕೃತವಾದ ಈ ದ್ವೀಪದ ಷಟ್ಕೋಣದ ಮಧ್ಯದಲ್ಲಿ ತ್ರಿಕೋಣವಿದೆ. ಅದರ ಮಧ್ಯದಲ್ಲಿರುವ ಗಣಪತಿಯನ್ನು ಧ್ಯಾನಿಸಬೇಕು. ಅವನ ಮುಖ ಗಜರಾಜನಂತಿದೆ. ಹಣೆಯಲ್ಲಿ ಚಂದ್ರನಿರುವ, ಕೆಂಪುಬಣ್ಣದ ಶರೀರವುಳ್ಳ, ಮೂರುಕಣ್ಣುಗಳುಳ್ಳ ಗಣಪತಿಯನ್ನು ಪದ್ಮಹಸ್ತಗಳಿಂದ ಪ್ರಿಯೆಯು ಆಲಂಗಿಸಿಕೊಂಡಿದ್ದಾಳೆ. ಗಣಪತಿಯ ಹಸ್ತದಲ್ಲಿ ದಾಳಿಂಬೆ, ಗದೆ, ಧನುರ್ಬಾಣ, ಚಕ್ರ, ಕಮಲ, ಪಾಶ, ಕಳಸ, ಅನ್ನದ ಜೋಳಿಗೆ ಮತ್ತು ಮುರಿದ ತನ್ನ ದಂತವಿದೆ ಎಂದು ವರ್ಣಿಸಲಾಗಿದೆ

ಪ್ರಾಣತೋಷಿಣಿಯಲ್ಲಿ ಗಣಪತಿಯ ಮತ್ತು ಅವನ ಶಕ್ತಿಯರ ಐವತ್ತು ಹೆಸರುಗಳು ಈರೀತಿಯಾಗಿವೆ:—

ವಿಘ್ನೇಶಃ, ವಿಘ್ನರಾಜಃ, ಚ ವಿನಾಯಕ, ಶಿವೋತ್ತಮೌ ।
ವಿಘ್ನಹೃತ್, ವಿಘ್ನಕರ್ತಾ ಚ ಗಣೈಕದ್ವಿಸುದಂತಕಾಃ ॥
ಗಜವಕ್ತ್ರ, ನಿರಂಜನೌ, ಕಪರ್ದೀ, ದೀರ್ಘಜೀವಕಃ ।
ಶಂಕುಕರ್ಣಃ ಚ ವೃಷಭಧ್ವಜಃ ಚ ಗಣನಾಯಕಃ ॥
ಗಜೇಂದ್ರಃ ಸೂರ್ಯಕರ್ಣಃ ಚ ಸ್ಯಾತ್ ತ್ರಿಲೋಚನ ಸಂಜ್ಞಕಃ ।
ಲಂಬೋದರ ಮಹಾನಂದೌ ಚತುರ್ಮೂರ್ತಿ ಸದಾಶಿವೌ ॥
ಅಮೋಘ ದುರ್ಮುಖೌ ಚೈವ ಸುಮುಖಃ ಚ ಪ್ರಮೋದಕಃ ।
ಏಕಪಾದೋ ದ್ವಿಜಿಹ್ವಃ ಚ ಶೂರ ವೀರ ಶಿವಾಮುಖಾಃ ॥
ವರದೋ ವಾಮದೇವಃ ಚ ವಕ್ರತುಂಡಃ ದ್ವಿರಂಡಕಃ ।
ಸೇನಾನೀಃ ಗ್ರಾಮಿಣೀಃ ಮತ್ತಃ ವಿಮತ್ತಃ ಮತ್ತವಾಹನಃ ॥

ಜಟೀ ಮುಂಡೀ ತಥಾ ಖಂಗೀ ವರೇಣ್ಯಃ ವೃಷಕೇತನಃ ।
ಭಕ್ಷ್ಯಪ್ರಿಯಃ ಗಣೇಶಃ ಚ ಮೇಘನಾಯಕ ಸಂಜ್ಞಕಃ ॥
ನಾಪೀ ಗಣೇಶ್ವರಃ ಪ್ರೋಕ್ತಃ ಪಂಚಾಶದ್ಗಣಪಾ ಇಮೆ ।

ಶಕ್ತಿಯರ ಹೆಸರುಗಳು :—

ಹ್ರೀಃ ಶ್ರೀಃ ಚ ಪುಷ್ಟಿಃ ಶಾಂತಿಃ ಚ ಕ್ಷಾಂತಿಃ ಚೈವ ಸರಸ್ವತೀ ।
ಸ್ವಾಹಾ ಮೇಘಾ ಕಾಂತಿಃ ಕಾಮಿನೀ ಮೋಹಿನೀ ಅಪಿ ವೈ
ನಟೀ ॥
ಪಾರ್ವತೀ ಜ್ವಾಲಿನೀ, ನಂದಾ ಸುಯಶಾಃ ಕಾಮರೂಪಿಣೀ ।
ಉಗ್ರತೇಜೋವತೀ ಸತ್ಯಾ ವಿಘ್ನೇಶಾನೀ ಸುರೂಪಿಣೀ ॥
ಕಾಮದಾ ಮದಜಿಹ್ವಾ ಚ ಭೂತಿಃ ಸ್ಯಾತ್ ಭೌತಿಕಾ ಸಿತಾ ।
ರಮಾ ಚ ಮಹಿಷೀ ಪ್ರೋಕ್ತಾ ಭಂಜಿನೀ ಚ ವಿಕರ್ಣಪಾ ॥
ಭೃಕುಟಿಃ ಸ್ಯಾತ್ ತಥಾ ಲಜ್ಜಾ ದಿರ್ಘ ಘೋಣಾ ಧನುರ್ಧರಾ।
ಯಾಮಿನೀ ರಾತ್ರಿ ಸಂಜ್ಞಾ ಚ ಕಾಮಾಂಧಾ ಚ ಶಶಿಪ್ರಭಾ ॥
ಲೋಲಾಸೀ ಚಂಚಲಾ ದೀಪ್ತಿಃ ಶುಭಗಾ ದುರ್ಭಗಾ ಶಿವಾ ।
ಗರ್ಭಾ ಚ ಭಗಿನೀ ಚೈವ ಭೋಗಿನೀ ಸುಭಗಾ ಮತಾ ॥
ಕಾಲರಾತ್ರಿಃ ಕಾಲಿಕಾ ಚ ಪಂಚಾಶಚ್ಛಕ್ತಯಃ ಸ್ಮೃತಾಃ ।

ಸ್ಪಷ್ಟವಾಗಿ ಒಂದುಕಡೆ ತೋರಿಸಲು ಸಂಧಿಗಳನ್ನು ಬಿಡಿಸಿ ಹೇಳಿದೆ.

ವಿಶೇಷ ಸಮಯ ಹಾಗು ಸಂಪ್ರದಾಯಗಳಂತೆ ಗಣಪತಿಯ ಪೂಜೆಯು ತಂತ್ರಗಳಲ್ಲಿ ಪೃಥಕ್ಕಾಗಿ ಹೇಳಿದೆ. ಅವುಗಳನ್ನೆಲ್ಲಾ ಹೇಳಬೇಕಾದರೆ ಅದಕ್ಕಾಗಿ ಒಂದು ಬೃಹದ್ಗ್ರಂಥವೇ ಆಗುತ್ತದೆ. ಇಲ್ಲಿ ಅವುಗಳ ದಿಗ್ದರ್ಶನವನ್ನು ಮಾತ್ರ ಮಾಡಿದ್ದೇವೆ. ಕೆಲವು ಕಡೆ ಗಣೇಶನ ಹಸ್ತದಲ್ಲಿ ಬೀಜಪೂರ (ದಾಳಿಂಬೆ ಅಥವಾ ನಿಂಬೆ) ಇರುತ್ತದೆ. ಮತ್ತೆ ಕೆಲವುಕಡೆ ಮೋದಕವಿರುತ್ತದೆ. ಅಸ್ತ್ರಗಳಲ್ಲಿಯೂ ಬದಲಾವಣೆಗಳಾಗಿವೆ. ವಾಹನ ಸಾಮಾನ್ಯವಾಗಿ ಇಲಿಯೇ. ಆದರೆ ಅವನಿಗೆ ಬೇರೆ

ಬೇರೆ ವಾಹನಗಳೂ ಉಂಟು. ಹೇರಂಬ ಗಣಪತಿ ಸಿಂಹವಾಹನನಾಗಿದ್ದಾನೆ. ಒಂದು ಕಡೆ ಸಮಮುದ್ರೆಯಲ್ಲಿ ನಿಂತಿದ್ದಾನೆ. ಮತ್ತೊಂದು ಕಡೆ ದ್ವಿಭಂಗಿ ತ್ರಿಭಂಗಿಗಳಲ್ಲಿ ನಿಂತಿರುತ್ತಾನೆ. ಮುಖ ಮಾತ್ರ ಗಜಮುಖವೇ, ಆದರೆ ಪಂಚಮುಖದ ಮೂರ್ತಿಗಳು ಸಿಕ್ಕಿವೆ. ಸಾಮಾನ್ಯವಾಗಿ ಅವನ ಬಣ್ಣ ಸಿಂದೂರದಂತೆ ಕೆಂಪಾಗಿರುತ್ತದೆ. ಕೆಲವುಕಡೆ ಬಿಳುಪು ಮತ್ತು ಕಪ್ಪುಬಣ್ಣವೂ ಉಂಟು. ಹರಿದ್ರಾಗಣಪತಿ ಹಳದೀ ಬಣ್ಣವೇ ಆಗಿರುತ್ತದೆ. ಕೊರಳಲ್ಲಿ ಯಜ್ಞೋಪವೀತವಿರುತ್ತದೆ. ಕೆಲವು ಕಡೆ ಸೊಂಟಪದಲ್ಲಿ ಸರ್ಪವನ್ನು ಕಟ್ಟಿಕೊಂಡಿರುವುದೂ ಊಂಟು. ಈ



ಪಂಚಮುಖ ಮತ್ತು ಹೇರಂಬ ಗಣಪತಿ

ರೀತಿಯಾಗಿ ಧಾನ್ಯಗಳಿಗನುಸಾರವಾಗಿ ಪ್ರತಿಮೆಗಳು ಸಿಕ್ಕುತ್ತವೆ. ಎಲ್ಲಾ ಧ್ಯಾನಗಳಿಗನುಸಾರವಾಗಿ ಮೂರ್ತಿಗಳು ಚಿತ್ರಿತವಾಗಿಲ್ಲದಿರುವುದು ನಮ್ಮ ಪುಣ್ಯ.



ಷೋಡಶಬಾಹು ಗಣಪತಿ

ನೇಪಾಳದಲ್ಲಿ ಇಲಿಯಮೇಲೆ ನಿಂತು ನೃತ್ಯಮಾಡುವ ಗಣಪತಿಯ ಮೂರ್ತಿಗಳಿವೆ. ಅಲ್ಲಿಯ ಇಲಿಯ ಮುಖದಲ್ಲಿ ಚಿಂತಾಮಣಿ ಇದೆ. ಸೂರ್ಯನ ತೇಜಸ್ಸಿನಿಂದ ಹುಟ್ಟಿತೆಂದು ಅದಕ್ಕೆ ಸೂರ್ಯವಿನಾಯಕ ನೆಂದು ನೇಪಾಲೀ ಬೌದ್ಧರು ಕರೆಯುತ್ತಾರೆ. ಇವನಿಗೆ ರಕ್ತ ಹಾಗು ಪಶುಬಲಿಯನ್ನು ಕೊಡುತ್ತಾರೆ. ನೇಪಾಳದ ಖಟಮಂಡುವಿನಲ್ಲಿ ಎರಡು



ನೃತ್ಯಗಣಪತಿ

ಮೂರ್ತಿಗಳಿವೆ. ಪ್ರತಿಯೊಂದರ ಪಾದದ ಕೆಳಗಡೆ ಒಂದೊಂದು ಇಲಿ ಇದೆ. ಸಿರಸ್ಸು ಒಂದೊಂದೇ, ಆದರೆ ಒಂದಕ್ಕೆ ನಾಲ್ಕು ಬಾಹುಗಳು ಮತ್ತೊಂದಕ್ಕೆ ಹದಿನಾರು ಬಾಹುಗಳಿವೆ. ನೇಪಾಲದ ಒಂದು ಮಂದಿರ ದಲ್ಲಿ ಐದು ವಿನಾಯಕರ ಮೂರ್ತಿಗಳು ಜೊತೆಯಲ್ಲಿವೆ. ಮಧ್ಯದಲ್ಲಿ ಸೂರ್ಯವಿನಾಯಕ, ಅವನ ನಾಲ್ಕು ಕಡೆಗಳಲ್ಲಿ ರಕ್ತವಿನಾಯಕ, ಸಿದ್ಧ ವಿನಾಯಕ, ಚಂದ್ರವಿನಾಯಕ ಮತ್ತು ಅಶೋಕವಿನಾಯಕರಿದ್ದಾರೆ.

ಗಣಪತಿಗಳಲ್ಲಿ ಚೋರಗಣಪತಿಯೊಂದಿದೆ. ಆದರ ಮಹಿಮೆ ಅಸಾಧ್ಯವಾಗಿದೆ. ವರ್ಣವಿಲಾಸ ತಂತ್ರದಲ್ಲಿ ಒಂದು ಕಡೆ ಗಣೇಶನೇ

ಅವನ ಮಹಿಮೆಯನ್ನು ಹೇಳಿದ್ದಾನೆ:—

ಚೌರಮಂತ್ರ ಪರಿಜ್ಞಾನಂ ವಿನಾ ಹೇ ಬ್ರಾಹ್ಮಣೀಶ್ವರಿ ।
ಪುರಾಣಂ ಪ್ರಪಠೇದ್ಯಸ್ತು ಸ ಏವ ಮೂರ್ತಿಮಾನ್ ಕಲಿಃ ॥
ಪರಜನ್ಮನಿ ಪಾಪಿಷ್ಠಃ ಸ ಭವೇಚ್ಚೌರ ಕುಕ್ಕುರಃ ।
ಶಿವಪೂಜಾ ವಿಷ್ಣುಪೂಜಾ ಶಕ್ತಿಪೂಜಾ ತಥೈವ ಚ ॥
ಸರ್ವ ಪೂಜಾಸು ಯತ್ತೇಜೋ ಹರತೆ ಗಣಪಃ ಸ್ವಯಂ ।
ತಸ್ಮಾಚ್ಚೌರ ಪ್ರಬೋಧಾರ್ಥಂ ಚೌರ ಮಂತ್ರಾನ್ ಜಪೇದ್ಬುಧ ॥
ತತಸ್ತು ಪೂಜಯೇದ್ಧೀಮಾನ್ ಯಸ್ಯ ಯಾ ಇಷ್ಟದೇವತಾ ।
ತತಃ ಫಲಮವಾಪ್ನೋತಿ ಬ್ರಹ್ಮಾದಿತ್ರಿದಿವೌಕಸಃ ।
ಚೌರಮಂತ್ರಂ ಮಹಾಮಂತ್ರಂ ಪಂಚಾಶದ್ಗಣತೋಷಣಂ ॥

ಚೋರ ಮಂತ್ರವನ್ನು ತಿಳಿದುಕೊಳ್ಳದೆ ಯಾರು ಪುರಾಣವನ್ನು ಓದುವರೋ ಅವರು ಕಲಿಪುರುಷರು, ಪಾಪಿಷ್ಟರು. ಅವರು ಮುಂದಿನ ಜನ್ಮದಲ್ಲಿ ನಾಯಿಯಾಗಿ ಹುಟ್ಟುವರು. ಶಿವ, ವಿಷ್ಣು, ಶಕ್ತಿ ಇತ್ಯಾದಿ ದೇವತೆಗಳನ್ನು ಪೂಜಿಸಿದ ಫಲವನ್ನು ಚೋರಗಣಪತಿಯು ಅಪಹರಿಸುತ್ತಾನೆ. ಆದುದರಿಂದ ಈ ಚೌರ್ಯವನ್ನು ತಡೆಯಲು ಚೋರಮಂತ್ರವನ್ನು ಜಪಿಸಬೇಕು. ಅನಂತರ ತನ್ನ ಇಷ್ಟದೇವತೆಯನ್ನು ಪೂಜಿಸಬೇಕು. ಇದರಿಂದ ಬ್ರಹ್ಮಾದಿ ದೇವತೆಗಳನ್ನು ಪೂಜಿಸಿದ ಫಲ ಲಭಿಸುವುದು. ಚೋರ ಮಂತ್ರವು ಒಂದು ಮಹಾಮಂತ್ರವಾಗಿದೆ. ಇದರಿಂದ ಐವತ್ತು ಗಣಪತಿಗಳು ಸಂತುಷ್ಟರಾಗುತ್ತಾರೆಂದು ಗಣಪತಿಯು ದೇವಿಗೆ ಹೇಳಿದ್ದಾನೆ.

ನಮ್ಮ ಶರೀರದಲ್ಲಿ ಹನ್ನೊಂದು ದ್ವಾರಗಳಿವೆ. ಅಲ್ಲಿ ಮಂತ್ರನ್ಯಾಸ ಮಾಡುವುದರಿಂದ ಆ ದ್ವಾರಗಳು ಮುಚ್ಚಲ್ಪಡುತ್ತವೆ. ಆದರಿಂದ ಅನುಷ್ಠಾನದ ಫಲವುಂಟಾಗುತ್ತದೆ. ಪ್ರತಿಯೊಂದು ಸ್ಥಾನದಲ್ಲಿ ಮಂತ್ರವನ್ನು ಹತ್ತುಸಾರಿ ಉಚ್ಚರಿಸಬೇಕು. ಆ ಪ್ರತಿಸ್ಥಾನದ ಮಂತ್ರಗಳು ಈರೀತಿಯಾಗಿವೆ:—

ಬಲದ ಕಣ್ಣಿನಲ್ಲಿ—ಹ್ರೀಂ, ಹ್ರೀಂ
ಎಡದ ಕಣ್ಣಿನಲ್ಲಿ—ಹ್ರೀಂ, ಹ್ರೀಂ
ಬಲದ ಕಿವಿಯಲ್ಲಿ—ಹ್ರೀಂ, ಹ್ರೀಂ
ಎಡದ ಕಿವಿಯಲ್ಲಿ—ಹ್ರೀಂ, ಹ್ರೀಂ
ಮೂಗಿನ ಬಲದ್ವಾರದಲ್ಲಿ—
ಹುಂ, ಹುಂ
ಮೂಗಿನ ಎಡದ್ವಾರದಲ್ಲಿ—
ಹುಂ, ಹುಂ

ಮುಖದಲ್ಲಿ- ಹ್ರೀಂ, ಹ್ರೀಂ, ಹ್ರೀಂ,
ಹ್ರೀಂ, ಹ್ರೀಂ
ನಾಭಿಯಲ್ಲಿ—ಐಂ, ಲೀಂ
ಗುಹ್ಯಾಂಗದಲ್ಲಿ—ಹೌಃ
ಗುದದಲ್ಲಿ—ಬ್ಲುಂ, ಬ್ಲುಂ
ಭ್ರೂ ಮಧ್ಯದಲ್ಲಿ—ಹುಂ.

ಇದಕ್ಕಿಂತ ಮೊದಲು ಹೃದಯದಲ್ಲಿ ಹ್ರೋನ್ ಮಂತ್ರವನ್ನು ಹತ್ತುಸಾರಿ ಜಪಿಸಬೇಕು. ಎಲ್ಲಾ ಪೂಜೆಗಳಿಗಿಂತ ಚೋರಗಣಪತಿಯ ಪೂಜಾವಿಧಾನವು ಮೊದಲಿದೆ. ಆದರೆ ಮಹಾನಿರ್ವಾಣ ತಂತ್ರದಲ್ಲಿ ಚೋರಗಣಪತಿಯ ಪೂಜಾ ವಿಧಾನವು ಅಂತ್ಯದಲ್ಲಿದೆ. ಬ್ರಹ್ಮಗಾಯತ್ರೀ ಮಂತ್ರವನ್ನು ಜಪಿಸಿದ ಮೇಲೆ ಇದನ್ನು ಜಪಿಸಬೇಕು. ಗಾಯತ್ರೀ ಅನುಷ್ಠಾನವನ್ನು ಚೋರಗಣಪತಿಯನ್ನು ಪೂಜಿಸದಯೇ ಮಾಡಬಹುದು. ಬ್ರಹ್ಮಗಾಯತ್ರೀ ಜಪಕ್ಕೆ ವಿಘ್ನವನ್ನುಂಟುಮಾಡುವ ಶಕ್ತಿ ಚೋರಗಣಪತಿಗಿರುವುದಿಲ್ಲ. ಗಣೇಶನ ಅಧ್ಯಾತ್ಮರೂಪದ ನಿದರ್ಶನಕ್ಕಾಗಿ ತಂತ್ರರಾಜದ ಒಂದು ಶ್ಲೋಕವನ್ನು ಉದಾಹರಿಸುತ್ತೇನೆ:—

ಅನಾದ್ಯಂತೋಽಪರಾಧೀನಃ ಸ್ವಾಧೀನ ಭುವನತ್ರಯಃ ।
ಜಯತ್ಯವಿರತೋ ವ್ಯಾಪ್ತವಿಶ್ವಃ ಕಾಲೋ ವಿನಾಯಕಃ ॥

ಇದರಲ್ಲಿ ಆದ್ಯಂತರಹಿತ ನಿತ್ಯಕಲಾಸ್ವರೂಪನೆಂದು ವಿನಾಯಕನಿಗೆ ಹೇಳಿದೆ. ಅವನು ವಿಶ್ವವ್ಯಾಪಿಯಾಗಿದ್ದಾನೆ. ಸುಭಗಾನಂದನಾಥನು ಮನೋರಮಾ ಟೀಕೆಯಲ್ಲಿ ಗಣೇಶನು ತ್ರಿಭುವನಗಳಲ್ಲೂ ತಾದಾತ್ಮ್ಯವನ್ನು ಹೊಂದಿದ್ದಾನೆಂದು ಹೇಳಿದ್ದಾನೆ. ವಿನಾಯಕನನ್ನು ಪರಮಾತ್ಮನ ಸ್ವರೂಪದಲ್ಲಿ ವರ್ಣಿಸಲಾಗಿದೆ.

ಗಣೇಶನನ್ನು ತಮ್ಮತಮ್ಮ ಧ್ಯಾನಗಳಿಗನುಸಾರವಾಗಿ ಪೂಜಿಸುತ್ತಾರೆ. ಆದರೆ ಗಾಣಾಪತ್ಯರಲ್ಲಿ ಶ್ರೇಷ್ಠ ಉಪಾಸಕರು ಗಣಪತಿಯನ್ನು ಲಿಂಗರೂಪದಲ್ಲಿ ಅರ್ಚಿಸುತ್ತಿದ್ದರು. ಲಿಂಗದಲ್ಲಿ ಎರಡು ವಿಧ. ಒಂದು ಸ್ವಯಂಭುಲಿಂಗ ಮತ್ತೊಂದು ಗಾಣಾಪತ್ಯಲಿಂಗ. ಸ್ವಯಂಭು ಲಿಂಗವು ಶಿವಲಿಂಗದ ರೂಪದಲ್ಲಿಯೇ ಇರುತ್ತದೆ. ಈ ಲಿಂಗವು ಸ್ವತಃ ಭೂಮಿಯಿಂದ ಉದ್ಭವಿಸಿದುದೆಂದು ಮತ್ತು ಆ ಲಿಂಗವು ಬಹಳ ಶಕ್ತಿಸಂಪನ್ನವಾದುದು ಹಾಗು ಮಹಾ ಸಿದ್ಧಿಗಳನ್ನು ಅನುಗ್ರಹಿಸುವುದೆಂದು ನಂಬಿಕೆ ಇದೆ. ಈ ಸ್ವಯಂಭು ಲಿಂಗಗಳು ಪರ್ವತಗಳಲ್ಲಿಯ ಸ್ಥೂಪಾಕಾರದ ಕಲ್ಲುಗಳೇ ವಿನಹ ಬೇರೆಯಲ್ಲ. ಇವುಗಳನ್ನು ಕುಂಕುಮದಿಂದ ಪೂಜಿಸುತ್ತಾರೆ. ಈ ಲಿಂಗಗಳನ್ನು ಈಗಲೂ ಕಾಶ್ಮೀರದಲ್ಲಿ ಕಾಣಬಹುದು. 'ಗಣೇಶ ಬಲ' ಎಂಬ ಸ್ಥಳದಲ್ಲಿರುವ ಲಿಂಗದ ಮಹಿಮೆ ಬಹಳವಾಗಿದೆ. ಇದರ ವಿಷಯವಾಗಿ ಒಂದು ದಂತ ಕಥೆ ಇದೆ:—

ಸಿಕಂದರನು ಬುತಶಿಕನ್ ಇತ್ಯಾದಿ ಮಂದಿರಗಳನ್ನು ನಾಶಮಾಡಿ ಗಣೇಶಬಲದ ಲಿಂಗವನ್ನು ನಾಶಮಾಡಲು ಬಂದಾಗ ಜೇನುಹುಳುಗಳು ಬಂದು ಸಿಕಂದರನ ಅನೇಕ ಸೈನ್ಯವನ್ನು ನಾಶಮಾಡಿದವೆಂದು ಹೇಳುತ್ತಾರೆ. ಆ ಗಣೇಶಘಾಟಿಯ ಲಿಂಗವು ಸ್ವಲ್ಪ ಆನೆಯ ಸಿರಸ್ಸನ್ನು ಹೋಲುತ್ತದೆ. ಎರಡನೆಯ ಗಾಣಾಪತ್ಯ ಲಿಂಗವು ಬೀಜಪೂರ (ದಾಳಿಂಬೆ ಅಥವಾ ನಿಂಬೆ) ಕೂಷ್ಮಾಂಡ(ಕುಂಬಳ) ಅಥವಾ ಜಂಬೂ(ನೇರಳೆ) ಫಲಗಳ ಆಕಾರದಲ್ಲಿರುತ್ತಿದ್ದವು. ಒಂದೇ ಮಂದಿರದಲ್ಲಿ ಸ್ವಯಂಭು ಮತ್ತು ಗಾಣಾಪತ್ಯ ಲಿಂಗಗಳಿರುತ್ತಿದ್ದವು. ಸ್ವಯಂಭುಲಿಂಗವು ಗರ್ಭಗುಡಿಯಲ್ಲಿರುತ್ತಿತ್ತು. ಅದನ್ನು ಸಾಮಾನ್ಯವಾಗಿ ಯಾರೂ ನೋಡಲಾಗುತ್ತಿರಲಿಲ್ಲ. ಭಕ್ತರಿಗೆ ಗಾಣಾಪತ್ಯ ಲಿಂಗವನ್ನು ತೋರಿಸಲಾಗುತ್ತಿತ್ತು.

ಒಂದೆರಡು ಮಾತುಗಳನ್ನು ಹೇಳಿ ಈ ಅಧ್ಯಾಯವನ್ನು ಮುಗಿಸುತ್ತೇನೆ. ಹಿಂದೆ ಗಣಪತಿಯ ಬೀಜಮಂತ್ರವನ್ನು ಗಮ್ ಎಂದು ಹೇಳಿ

ಧ್ದೇನೆ. ಶಿವನ ಬೀಜಮಂತ್ರವು ಸಹ ಗಮ್ ಎಂದಿದೆ. ಗ ಎಂಬುದು ಅಗ್ನಿಯ ಹೆಸರು. 'ಅಗ್ನಿರ್ವೈ ರುದ್ರಃ' ಅಗ್ನಿಯು ರುದ್ರನಿಂದ ಅಭಿನ್ನ ವಾದುದು. ಗಣೇಶನನ್ನು ಕೆಲವು ತಾಂತ್ರಿಕ ಧ್ಯಾನಗಳಲ್ಲಿ ತ್ರಿಕೋಣದ ಮಧ್ಯದಲ್ಲಿ ಸ್ಥಾಪಿಸಲಾಗಿದೆ. ತ್ರಿಕೋಣವು ತೈಜಸರೂಪವೆಂದು ತಿಳಿದಿ ಧ್ದೇವೆ. ಇದರಿಂದ ಗಣಪತಿ ಶಿವ ಮತ್ತು ತೇಜಸ್ಸು ಇವುಗಳಲ್ಲಿ ಒಂದು ರೀತಿಯ ಸಂಬಂಧವಿದೆ ಎಂದು ತಿಳಿಯಬಹುದು. ಗಣಪತಿಯನ್ನುಲಿಂಗ ರೂಪದಲ್ಲಿ ಪೂಜಿಸುವುದಕ್ಕೆ ಇದು ನಿದರ್ಶನವಾಗಿದೆ. ಗಜವದನ ಗಣ ಪತಿಯ ಪೂಜೆಯು ಸಮಸ್ತ ಹಿಂದುಗಳಲ್ಲಿ ಹಾಸುಹೊಕ್ಕಾಗಿ ಬೆಳೆದು ಬಂದಿದೆ. ಆದರೆ ಗಣಪತಿಯೊಬ್ಬನನ್ನೇ ದೇವನೆಂದು ಆರಾಧಿಸುವವರು ಯಾರೂ ಇಲ್ಲ.



# ಅಧ್ಯಾಯ ೮

## ಗಣಪತಿ ತತ್ತ್ವ

ಹಿಂದಿನ ಏಳು ಅಧ್ಯಾಯಗಳಲ್ಲಿ ಗಣೇಶನ ಸ್ವರೂಪ ದರ್ಶನವನ್ನು ಮಾಡಿದ್ದೇವೆ. ವೇದಗಳಲ್ಲಿ ಗಣೇಶನ ದರ್ಶನವಿಲ್ಲ. ಆದರೆ ಪುರಾಣಗಳಲ್ಲಿ ಅವನ ವಿಷಯ ಬಹಳವಾಗಿ ವರ್ಣಿತವಾಗಿದೆ. ತಂತ್ರಗಳಲ್ಲಿ ಚಕಿತಗೊಳಿಸುವ ಅವನ ವಿಗ್ರಹ ವಿಚಾರಗಳಿವೆ. ಆದರೂ ಹಿಂದೂ ಸಮಾಜದ ಮನೆಮನೆಗಳಲ್ಲಿ ಅವನ ಪೂಜಾಪಾಠಗಳು ನಡೆಯುತ್ತಲಿವೆ. ಎಲ್ಲಾ ಮಂಗಳ ಕಾರ್ಯಗಳಲ್ಲಿ ಗಣೇಶನಿಗೆ ಅಗ್ರಪೂಜೆ ಸಲ್ಲುತ್ತಿದೆ. ಗಣಪತಿ ಯಾರು? ಅವನ ತತ್ತ್ವವೇನು? ಎಂಬ ಪ್ರಶ್ನೆಗಳು ಸಾಮಾನ್ಯವಾಗಿ ಹುಟ್ಟುತ್ತವೆ. ಪುರಾಣಗಳ ರಚನಾ ಕಾಲವು ಗುಪ್ತರ ಕಾಲಕ್ಕೆ ಸಮನಿರಬಹುದೆಂದು ತಿಳಿಯಬರುತ್ತೆ. ಕೆಲವು ತಂತ್ರ ಗ್ರಂಥಗಳು ಹಾಗು ಆ ಗ್ರಂಥಗಳ ಕೆಲವು ಅಂಶಗಳು ಪುರಾಣದಷ್ಟೇ ಪ್ರಾಚೀನ. ಪುರಾಣಗಳಲ್ಲಿ ಗಣಪತಿಯ ಪೂಜೆಯು ಚರ್ಚಿತವಾಗಿರುವುದರಿಂದ ಪುರಾಣಗಳಿಗಿಂತ ಮೊದಲೇ ಗಣಪತಿ ಪ್ರಸಿದ್ಧನಾಗಿರಬೇಕು. ವಿಕ್ರಮ ಶಕೆ ೫ ಅಥವಾ ೬ನೇ ಶತಮಾನದಲ್ಲಿ ಭಾರತೀಯರಿಗೆ ಗಣಪತಿ ಪರಿಚಿತನಾಗಿದ್ದನು. ಬುದ್ಧನ ಕಾಲದ ದೇವಗಣಗಳಲ್ಲಿ ಗಣಪತಿಯು ಸೇರಿದ್ದನೆಂದು ಹೇಳುವುದು ಕಷ್ಟ. ಬುದ್ಧನು ಬ್ರಹ್ಮ, ಇಂದ್ರ ಹಾಗು ಇತರ ದೇವತೆಗಳನ್ನು ಉಲ್ಲೇಖಿಸಿದ್ದಾನೆ. ಆದರೆ ಗಣೇಶನನ್ನು ಎಲ್ಲಿಯೂ ಹೇಳಿಲ್ಲ. ಅದೇ ಸಮಯದ ತೀರ್ಥಂಕರ ವರ್ಧಮಾನನು ಎಲ್ಲಿಯೂ ಗಣಪತಿಯನ್ನು ಉದಾಹರಿಸಿಲ್ಲ.

ಶ್ರುತಿಕಾಲದ ಅನಂತರ ಮತ್ತು ಪುರಾಣಕಾಲದ ಮಧ್ಯದಲ್ಲಿ ಗಣಪತಿಯು ಎಲ್ಲಿಂದ ಹೇಗೆ ಬಂದು ದೇವತೆಗಳ ಶ್ರೇಣಿಯಲ್ಲಿ ಸ್ಥಾನವನ್ನು ಪಡೆದನು? ಬುದ್ಧ ಹಾಗು ಪುರಾಣಗಳ ಅಂತರ ಸುಮಾರು ೧೦೦೦ ವರ್ಷಗಳಿರಬಹುದು. ಈ ಅಂತರದಲ್ಲಿ ಆರ್ಯರ ದೇವತೆಗಳ

ಶ್ರೇಣಿಯಲ್ಲಿ ಹೇಗೆ ಬಂದನೆಂಬುದೇ ಸಮಸ್ಯೆಯಾಗಿದೆ. ವೇದಗಳಲ್ಲಿ ಇಂದ್ರ, ಅಗ್ನಿ, ವರುಣರು ಪ್ರಧಾನರಾಗಿದ್ದು ಪುರಾಣಗಳಲ್ಲಿ ಮಾಂಡಲೀಕರಾಗಿದ್ದಾರೆ. ವೇದಗಳಲ್ಲಿ ಅಪ್ರಧಾನರಾದ ವಿಷ್ಣು ಮತ್ತು ರುದ್ರರು ಪುರಾಣಗಳಲ್ಲಿ ಪ್ರಧಾನರಾಗಿದ್ದಾರೆ. ಆದರೆ ವೈದಿಕ ವಾಙ್ಮಯದಲ್ಲಿ ಅಸ್ತಿತ್ವವಿಲ್ಲದೇ ಇದ್ದರೂ ಪುರಾಣಗಳಲ್ಲಿ ಅಗ್ರಸ್ಥಾನ ಪಡೆದವನು ಗಣಪತಿಯೊಬ್ಬನೇ. ಇಷ್ಟಲ್ಲದೆ ವೇದಾನುಯಾಯಿಗಳು ಗಣಪತಿಯ ಉಪಾಸಕರಾಗಿದ್ದಾರೆ. ಪುರಾಣ ಕಾಲಕ್ಕಿಂತ ಮೊದಲೇ ಮಹಾಯಾನ ಬೌದ್ಧಸಂಪ್ರದಾಯವು ವಿಕಸಿತವಾಗಿತ್ತು. ಅದರಲ್ಲಿ ಗಣೇಶನ ವರ್ಣನೆಗಳು ಬಂದಿವೆ. ಈ ವಿಚಾರವನ್ನು ಮುಂದಿನ ಅಧ್ಯಾಯದಲ್ಲಿ ಹೇಳುತ್ತೇನೆ.

ಗಣೇಶನು ಅನಾರ್ಯರ ಉಪಾಸ್ಯನೆಂದು ವಿದೇಶೀವಿದ್ವಾಂಸರ ಅಭಿಪ್ರಾಯವಾಗಿದೆ. ನಾನೂ ಸಹ ಆ ಅಭಿಪ್ರಾಯವನ್ನೇ ಒಪ್ಪುತ್ತೇನೆ. ಆರ್ಯರು ಬ್ರಹ್ಮಾವರ್ತದ ಕಡೆಗೆ ಬಂದಾಗ ದ್ರಾವಿಡರೇ ಮುಂತಾದ ಅನಾರ್ಯರೊಡನೆ ಯುದ್ಧಮಾಡಬೇಕಾಗಿ ಬಂದಿತು. ಆ ಯುದ್ಧದಲ್ಲಿ ಎಲ್ಲಾ ಅನಾರ್ಯರು ಹತರಾಗಲಿಲ್ಲ. ಉಳಿದವರಲ್ಲಿ ಕೆಲವರು ಕಾಡಿನಲ್ಲಿ ನೆಲಸಿದರು. ಆರ್ಯರಂತೆ ನಾಗರೀಕತೆಯಲ್ಲಿ ಮೊದಲಿನಿಂದಲೂ ಉನ್ನತ ಸ್ಥಿತಿಯಲ್ಲಿದ್ದ ಅನಾರ್ಯರು ಆರ್ಯರ ಸಂಸ್ಕೃತಿಯನ್ನು ತಮ್ಮ ಸಂಸ್ಕೃತಿಯಲ್ಲಿ ಸೇರಿಸಿಕೊಂಡು ಮೊದಲಿನಂತೆ ನಿರ್ಭೀತರಾಗಿ ವಾಸಿಸುತ್ತಿದ್ದರು. ಬಹುತೇಕವಾಗಿ ಅನಾರ್ಯರು ಆರ್ಯರ ಜೊತೆಯಲ್ಲಿ ವಾಸಿಸುತ್ತಿದ್ದರು. ಜಾತಿಭ್ರಷ್ಟ ಆರ್ಯರು ಅನಾರ್ಯರೊಡನೆ ಸೇರಿದರು. ಇವರ ಸಂಖ್ಯೆ ವೃದ್ಧಿಯಾಯಿತು. ಬ್ರಾಹ್ಮಣರಿಗಿಂತ ಇವರ ಸ್ಥಾನಮಾನಗಳು ಕಡಿಮೆಯಾಗಿರಲಿಲ್ಲ.

ಸಾಮಾಜಿಕ ಧರ್ಮದಲ್ಲಿ ಸಾಂಕರ್ಯವಾದೀತೆಂದು ಹೆದರಿ ವಿವಾಹಾದಿಗಳಿಗೆ ಕಠಿಣ ನಿಯಮಗಳನ್ನು ರಚಿಸಿದರು. ಆದರೆ ಅವರಿಂದ

ವಿಚಾರ ಸಾಂಕರ್ಯವನ್ನು ತಡೆಯಲಾಗಲಿಲ್ಲ. ಒಂದೇ ಕಡೆ ಆರ್ಯ ಮತ್ತು ಅನಾರ್ಯರು ವಾಸಿಸುತ್ತಿದ್ದರು. ಕ್ರಯ ವಿಕ್ರಯಗಳನ್ನು ಮಾಡು ತ್ತಿದ್ದರು. ಪರಸ್ಪರ ಶಾಸಕ-ಶಾಸಿತ, ಸ್ವಾಮಿ-ಸೇವಕರ ಸಂಬಂಧ ಬೆಳೆ ಯಿತು. ಇದರಿಂದ ಆಚಾರ-ವಿಚಾರಗಳಲ್ಲಿ ಪರಸ್ಪರ ಪ್ರಭಾವ ಬೀಳು ವುದು ಸ್ವಾಭಾವಿಕ. ಅನಾರ್ಯರು ಆರ್ಯರಿಂದ ಸುಸಂಸ್ಕೃತರಾದರು. ಆರ್ಯರೂ ಸಹ ಅನಾರ್ಯರಿಂದ ಕೆಲವನ್ನು ಕಲಿತರು. ಆರ್ಯರ ಉಪಾಸ್ಯ ವಸ್ತು ಅಮೂರ್ತ ಮತ್ತು ಜ್ಯೋತಿಸ್ವರೂಪ. ಆರ್ಯರ ದೇವನಾದ ರುದ್ರನು ಉಗ್ರಸ್ವಭಾವದವನಾಗಿದ್ದರೂ ಸತ್ಕಾರ್ಯಗಳಲ್ಲಿ ತೊಂದರೆಯನ್ನುಂಟುಮಾಡುತ್ತಿರಲಿಲ್ಲ. ಅವನು ಧರ್ಮವಿರೋಧಿಗಳ ಶತ್ರುವಾಗಿದ್ದನು. ಬ್ರಹ್ಮದ್ವೇಷಿಗಳನ್ನು ನಾಶಮಾಡಲು ಪರಾಶಕ್ತಿಯು ರುದ್ರನನ್ನು ಚೇತರಿಸುತ್ತಿದ್ದಳೆಂದು ಋಗ್ವೇದದ ದೇವೀ ಸೂಕ್ತದಲ್ಲಿ ಹೇಳಿದೆ. ಪ್ರಜ್ವಲಿಸುವ ಅಗ್ನಿಯಲ್ಲಿ ಹವಿಸ್ಸನ್ನು ಹಾಕಿ ಶಾಂತಗೊಳಿಸು ತ್ತಿದ್ದರು. ರುದ್ರನು ಸತ್ಯಸಂಕಲ್ಪ ಮತ್ತು ಸತ್ಯಸ್ವರೂಪನಾಗಿದ್ದನು. ಅಧರ್ಮ ವಿರೋಧೀ ಮತ್ತು ಸತ್ಯದ ಪೋಷಕನಾಗಿದ್ದನು. ಆರ್ಯರು ತಮ್ಮ ಸಹವಾಸಿಗಳಾದ ಅನಾರ್ಯರಿಂದ ಕೆಲವು ಉಪಾಸ್ಯ ದೇವತೆಗಳನ್ನು ತೆಗೆದುಕೊಂಡರು. ನಾಗ, ಭೈರವ ಇತ್ಯಾದಿಗಳು ಅನಾರ್ಯರ ಕೊಡುಗೆಗಳಾಗಿವೆ. ಪ್ರೇತ, ಪಿಶಾಚ, ಪಶು ಪಕ್ಷಿ ಇವುಗಳೆಲ್ಲವೂ ಅನಾರ್ಯರಿಂದ ಬಂದವುಗಳು. ಗಣೇಶನೂ ಸಹ ಇದೇರೀತಿಯಾಗಿ ಬಂದವನಾಗಿದ್ದಾನೆ. ಈರೀತಿಯಾದ ಆದಾನ ಪ್ರದಾನಗಳಾಗಬೇಕಾದರೆ ಹಲವು ವರ್ಷಗಳು ಕಳೆದಿರಬಹುದು. ಇದು ಅವಶ್ಯಕವೂ ಆಗಿದ್ದಿತು.

ಆರ್ಯರ ಉಪಾಸ್ಯ ದೇವತೆಗಳು ಮನುಷ್ಯರ ಹಿತೈಷಿಗಳಾ ಗಿದ್ದರು. ಅನಾರ್ಯರ ದೇವತೆಗಳು ಅಪದೇವತೆಗಳು. ಸ್ವಭಾವತಃ ದುಷ್ಟರೂ, ಕ್ರೂರರೂ ಮತ್ತು ಮನುಷ್ಯರ ಶತೃಗಳೂ ಆಗಿದ್ದರು. ಇವರುಗಳಿಂದ ಕೆಲವರು ದುಲಗಿದ್ದಾಗಲೂ ಮತ್ತೆ ಕೆಲವರು ರೋಗಿ

ಗಳಾಗಿಯೂ ಸಾವನ್ನು ಹೊಂದುತ್ತಿದ್ದರು. ಉಳಿದವರು ಅನೇಕ ತೊಂದ ರೆಗಳನ್ನು ಅನುಭವಿಸುತ್ತಿದ್ದರು. ಆ ದೇವತೆಗಳು ತಮ್ಮ ಕ್ರೂರ ಸ್ವಭಾವ ವನ್ನು ಬಿಟ್ಟು ಶಾಂತರಾಗಲೆಂದು ಪೂಜಿಸಲಾಗುತ್ತಿತ್ತು. ಆರ್ಯರು ತಮ್ಮ ದೇವತೆಗಳು ತಮಗೆ ಸಹಾಯಕರಾಗಲೆಂದು ಪೂಜಿಸುತ್ತಿದ್ದರು. ತಾವು ಸ್ವೀಕರಿಸಿದ ಅನಾರ್ಯ ದೇವತೆಗಳು ತಮ್ಮ ಕಾರ್ಯಗಳಲ್ಲಿ ತೊಂದರೆಯನ್ನುಂಟುಮಾಡದಿರಲೆಂದು ಪೂಜಿಸುತ್ತಿದ್ದರು. ಗಣೇಶನು ಇದೇ ವರ್ಗಕ್ಕೆ ಸೇರಿದವನಾಗಿದ್ದಾನೆ. ಅವನ ಹಿಂದಿನ ಹೆಸರುಗಳಲ್ಲಿ ಬದಲಾವಣೆಗಳಾಗಲಿಲ್ಲ. ವಿಘ್ನರಾಜ, ವಿಘ್ನೇಶ್ವರನೆಂದೇ ಕರೆಯು ತ್ತಾರೆ. ಅವನು ಕೇವಲ ದುಷ್ಟರನ್ನೇ ಶಿಕ್ಷಿಸುತ್ತಿರಲಿಲ್ಲ. ಆದರೆ ಸತ್ಕರ್ಮಿಗಳನ್ನು ಮತ್ತು ಸುಖಜೀವಿಗಳನ್ನೂ ಸಹ ಹಿಂಸಿಸುತ್ತಿದ್ದನು. ವಿಷ್ಣು, ಸೋಮೇಶ್ವರ ಅಥವಾ ಶಿವಲಿಂಗದರ್ಶನಕ್ಕೂ ತೊಂದರಯನ್ನುಂ ಟುಮಾಡುತ್ತಿದ್ದನು. ಪುರಾಣ ಪುಣ್ಯಶ್ರವಣಗಳಿಂದ ಬರುವ ಪುಣ್ಯ ಫಲಗಳನ್ನು ಕದಿಯುತ್ತಿದ್ದನೆಂಬ ಪ್ರತೀತಿ ಇದೆ. ಆದುದರಿಂದ ಮೊದಲು ಇವನನ್ನು ಪೂಜಿಸಿ ತುಷ್ಟನನ್ನಾಗಿ ಮಾಡಿದರೆ ಇವನ ಸೈನ್ಯವೆಲ್ಲಾ ಶಾಂತವಾಗಿ ಪುಣ್ಯಕಾರ್ಯ ಮಾಡಲು ಸೈನ್ಯವು ಅವಕಾಶ ಮಾಡಿಕೊಡು ತ್ತದೆ. ಇದು ಗಣಪತಿಯು ಅನಾರ್ಯ ದೇವತೆ ಎಂಬುದಕ್ಕೆ ಸಾಕ್ಷಿ. ಆರ್ಯರು ಇವನನ್ನು ಅಂಗೀಕರಿಸಿದರೂ ವೈದಿಕ ಕರ್ಮಗಳಲ್ಲಿ ಇವನಿಗೆ ಸ್ಥಾನವಿಲ್ಲ. ಯಜ್ಞ ಯಾಗಾದಿಗಳು ಹಿಂದಿನ ಪರಿಪಾಠಿಯಲ್ಲಿಯೇ ನಡೆ ಯುತ್ತಲಿವೆ. ಅಲ್ಲಿ ಗಣೇಶನಿಗೆ ಆಹುತಿ ಕೊಡುವ ಪದ್ಧತಿ ಇಲ್ಲ. ಅವನು ತೊಂದರೆಗಳನ್ನುಂಟುಮಾಡಬಲ್ಲ, ಆದರೆ ಬ್ರಹ್ಮಗಾಯತ್ರೀ ಜಪದಲ್ಲಿ ವಿಘ್ನವನ್ನುಂಟುಮಾಡಲು ಅಸಮರ್ಥನಾಗಿದ್ದಾನೆ. ಆರ್ಯರು ಎಷ್ಟೇ ಪತಿತರಾದರೂ ವೇದಮಾತೆ ಗಾಯತ್ರೀ ಮಂತ್ರಕ್ಕೆ ಅಪಮಾನ ಮಾಡ ಲಿಲ್ಲ. ಗಾಯತ್ರೀ ಮಂತ್ರಕ್ಕೆ ಪ್ರಾಧಾನ್ಯತೆ ಕೊಡುತ್ತಿದ್ದರು.

ಗಣಪತಿಯ ಕಥೆಗಳಲ್ಲಿ ಅವನು ಶಂಕರನ ಔರಸ ಪುತ್ರನಲ್ಲ.

ಅವನ ಜನ್ಮದ ಅನಂತರ ಶಂಕರನು ಪುತ್ರನನ್ನಾಗಿ ಸ್ವೀಕರಿಸಿದನು. ಗಣಪತಿಗೆ ಪುತ್ರಸ್ಥಾನ ಲಭಿಸುವುದಕ್ಕಿಂತ ಮೊದಲು ಕೆಲವು ಉಪದ್ರವ ಗಳಿದ್ದವು. ಅವನನ್ನು ನೋಡಿ ದೇವತೆಗಳು ಹೆದರಿದರು. ದೇವತೆ ಗಳೊಡನೆ ಅಥವಾ ಶಂಕರನೊಡನೆ ಯುದ್ಧವಾಯಿತು. ಇದರಿಂದ ಮೊದಲು ಗಣಪತಿಗೆ ಆರ್ಯಧರ್ಮದಲ್ಲಿ ಪೂಜೆ ಇರಲಿಲ್ಲವೆಂದು ತಿಳಿಯು ಬರುತ್ತದೆ. ಶುದ್ಧ ವೈದಿಕ ಧರ್ಮಾನುಯಾಯಿಗಳು ಮತ್ತು ಶ್ರುತಿ ಸಮ್ಮತ ಧರ್ಮಮಾರ್ಗಿಗಳು ಗಣೇಶನ ಪ್ರಚಾರವನ್ನು ವಿರೋಧಿಸಿದರು. ದೀರ್ಘಕಾಲದವರೆವಿಗೆ ಈ ಜಗಳ ನಡೆಯುತ್ತಲೇ ಇದ್ದಿತು. ಅಂತ್ಯದಲ್ಲಿ ಪ್ರಾಚೀನ ವೈದಿಕ ಧರ್ಮಕ್ಕೆ ಸೋಲಾಯಿತು. ಆ ಸಮಯದಲ್ಲಿ ಗಣೇಶನು ವೈದಿಕ ಪೂಜೆಯಲ್ಲಿ ಪಾಲ್ಗೊಂಡು ದೇವತೆಗಳ ಮಧ್ಯದಲ್ಲಿ ಪ್ರತಿಷ್ಠಿತನಾದ. ಗಣಪತಿಯ ಪ್ರಚಾರ ಮೊದಲು ಸ್ತ್ರೀಯರಲ್ಲಿ ಪ್ರಾರಂಭ ವಾಯಿತು. ಅನಂತರ ಪುರುಷರು ಅದನ್ನು ಮುಂದುವರಿಸಿದರು. ಪಾರ್ವತಿಯು ತನ್ನ ಪ್ರಭಾವದಿಂದ ಮೊದಲು ಜನ್ಮವಿತ್ತಳು. ಅನಂತರ ಶಿವನು ಅವನನ್ನು ಪುತ್ರನನ್ನಾಗಿ ಮಾಡಿಕೊಂಡನು. ಪುರಾಣಗಳು ಈ ಅಂಶವನ್ನು ಸಮರ್ಥಿಸುತ್ತವೆ.

ಗಣೇಶನ ಸಂಬಂಧದಲ್ಲಿ ಅನೇಕ ಕಥೆಗಳಿವೆ. ಅವುಗಳಲ್ಲಿ ಮುಖ್ಯ ವಾದ ಕೆಲವು ಕಥೆಗಳ ಸಾರಾಂಶವನ್ನು ಹಿಂದಿನ ಅಧ್ಯಾಯಗಳಲ್ಲಿ ಹೇಳಿ ದ್ದೇನೆ. ಒಬ್ಬನ ವಿಷಯದಲ್ಲಿ ಸಾಮ್ಯಗಳಿಲ್ಲದ ಅನೇಕ ಕಥೆಗಳಿರುವುದ ರಿಂದ ಅವನು ಸಾಮಾನ್ಯ ವ್ಯಕ್ತಿಯಾಗಿದ್ದಿರಬೇಕು. ಅನಾರ್ಯರಲ್ಲಿ ಶ್ರುತಿ ಗ್ರಂಥಗಳಾಗಲೀ ಅಥವಾ ಪುರೋಹಿತರಾಗಲೀ ಇರಲಿಲ್ಲ. ಅವರು ತಮ್ಮ ವಿಘ್ನಕಾರಿ ಮತ್ತು ಉಪದ್ರವಗಳನ್ನುಂಟುಮಾಡುವ ದೇವತೆಗಳನ್ನು ಪೂಜಿಸುತ್ತಿದ್ದರು. ಅವುಗಳ ಸಂಬಂಧದಲ್ಲಿ ಹಾಡುಗಳನ್ನು ಹಾಡುತ್ತಿದ್ದಿ ರಬೇಕು; ಹಾಗೆಯೇ ವಿವಿಧ ಕಥೆಗಳೂ ಇದ್ದಿರಬೇಕು. ಅವುಗಳಲ್ಲಿ ಸಾಮ್ಯವಿಲ್ಲದಿದ್ದರೂ ಪ್ರಾದೇಶಿಕ ಭೇದಗಳಿದ್ದಿರಬೇಕು. ಪುರಾಣಗಳಲ್ಲಿ

ಈ ಕಥೆಗಳ ಸಂಕಲನವಾಗಿದೆ. ಪುರಾಣಗಳೆಲ್ಲವೂ ಒಂದೇ ಸಮಯದಲ್ಲಿ ಒಂದೇ ಸ್ಥಾನದಲ್ಲಿ ಒಬ್ಬನೇ ಬರೆದವಲ್ಲ. ಆದುದರಿಂದ ಕಥೆಗಳು ಭಿನ್ನ ಭಿನ್ನವಾಗಿವೆ. ರಾಮ, ಕೃಷ್ಣ ಇವರ ಕಥೆಗಳಲ್ಲಿ ಎಲ್ಲರ ಅಭಿಪ್ರಾಯವು ಒಂದೇ ಆಗಿದೆ. ಇಂದಿಗೂ ದೇವೀ ಹಾಗು ದೇವತೆಗಳ ಕಥೆಗಳು ಜನ ಸಾಮಾನ್ಯರಲ್ಲಿ ಪ್ರಚಲಿತವಾಗಿವೆ. ಅವುಗಳನ್ನು ಒಂದು ಕಡೆ ಸೇರಿಸಿದರೆ ಅವುಗಳಲ್ಲಿ ಸಾಮ್ಯ ವೈಷಮ್ಯಗಳಿರುವುದನ್ನು ಕಾಣಬಹುದು.

ಆರ್ಯರು ತಮ್ಮ ವಿಜಯ ಯಾತ್ರೆಯ ಅನಂತರ ಹಲವು ರೋಗ ಮತ್ತು ತೊಂದರೆಗಳನ್ನುಎದುರಿಸಬೇಕಾಗಿ ಬಂದಿತು. ಆದಿನಿವಾಸಿಗಳಾದ ಅನಾರ್ಯರು ರೋಗ ಮತ್ತು ಉಪದ್ರವ ನಿವಾರಣೆಗಾಗಿ ಕೆಲವು ದೇವತೆಗಳನ್ನು ಪೂಜಿಸುತ್ತಿದ್ದರು. ಕೀಳುದರ್ಜೆಯ ಅಶಿಕ್ಷಿತ ಆರ್ಯರು ಈ ದೇವತೆಗಳನ್ನು ಪೂಜಿಸತೊಡಗಿದರು. ವಿದ್ವಾಂಸರು ಈ ಪದ್ಧತಿಯನ್ನು ವಿರೋಧಿಸಿರಬೇಕು. ಆದರೆ ಅವರಿಗೆ ಯಶಸ್ಸು ಸಿಕ್ಕಿರಲಾರದು. ಆರ್ಯರ ಜೊತೆಯಲ್ಲಿ ವಾಸಿಸುತ್ತಿದ್ದ ಅನಾರ್ಯರು ತಮ್ಮ ದೇವತೆಗಳೊಡನೆ ಆರ್ಯರ ದೇವತೆಗಳನ್ನುಪೂಜಿಸತೊಡಗಿದರು. ಎರಡೆರಡು ಪದ್ಧತಿಗಳಿಂದ ಪೂಜಿಸುವವರನ್ನು ಇಂದು ನಾವು ನೋಡುತ್ತಿದ್ದೇವೆ. ಹಿಂದುಗಳು ಮಸೀದಿಗಳಲ್ಲಿ ಪ್ರಾರ್ಥಿಸುತ್ತಾರೆ. ಕ್ರಿಶ್ಚಿಯನ್ನರಾದ ಹಿಂದುಗಳು ಕ್ರಿಶ್ಚಿಯನ್ ದೇವತೆಗಳೊಡನೆ ಶೀತಲಾ (ಸಿಡುಬಿನ ಮಾರಿ) ಮತ್ತು ಭೈರವನನ್ನು ಪೂಜಿಸುತ್ತಾರೆ. ವಿದ್ವಾಂಸರಾದ ಹಿಂದು ಮತ್ತು ಕ್ರಿಶ್ಚಿಯನ್ನರು ಈ ಪದ್ಧತಿಗಳನ್ನುವಿರೋಧಿಸುತ್ತಾರೆ. ಆದರೆ ವಿದ್ವಾಂಸರ ಸಂಖ್ಯೆ ಬಹಳ ಕಡಿಮೆ. ಸಾಮಾನ್ಯ ಜನತೆಯ ಪ್ರಭಾವ ಎಲ್ಲರ ಮೇಲೆ ಬೀಳುವುದು ಸ್ವಾಭಾವಿಕ. ಕೆಲವು ಮುಸಲ್ಮಾನ ಚಕ್ರವರ್ತಿಗಳು ಹಿಂಸಾ ಕೃತ್ಯಗಳನ್ನೆಸಗದಿದ್ದರೆ ಮುಸಲ್ಮಾನ ದೇವತೆಗಳಾದ ಹಸನ್ ಹುಸೈನರು ಸಹ ಹಿಂದೂ ದೇವತೆಗಳಲ್ಲಿ ಸೇರಿಹೋಗುತ್ತಿದ್ದರು. ಪ್ರಕೃತದಲ್ಲಿ ಧರ್ಮನಿಷ್ಠ ಆಚಾರ ಸಂಪನ್ನರ ವಿರೋಧವಿದ್ದರೂ; ಕ್ರಮಕ್ರಮವಾಗಿ ವಿನಾ

ಯಕನ ಪೂಜೆಯು ಆರ್ಯರಲ್ಲಿ ಪ್ರಾರಂಭವಾಗಿ ವಿಶಾಲವಾಗಿ ಪ್ರಸಾರ ವಾಯಿತು. ಆರ್ಯರು ದೈತ್ಯ, ಅಸುರ, ರಾಕ್ಷಸ, ಯಾತುಧಾನ ಮೊದ ಲಾದ ವಿಘ್ನಕಾರಿಗಳ ಅಸ್ತಿತ್ವವನ್ನು ಒಪ್ಪಿಕೊಂಡಿದ್ದರು. ಆದುದರಿಂದ ಹೊಸ ವಿಘ್ನಕಾರಿಗಳನ್ನು ಒಪ್ಪಿಕೊಳ್ಳುವುದರಲ್ಲಿ ಅವರಿಗೆ ತೊಂದರೆಯೇ ನಾಗಲಿಲ್ಲ. ಅಪದೇವತೆಗಳನ್ನು ಯಾರೂ ನೋಡಿಲ್ಲ. ಅದೃಶ್ಯರೂಪಿಗಳಾದ ರಾಕ್ಷಸರಂತೆ ಭೈರವ ಮತ್ತು ವಿನಾಯಕರ ಇರುವಿಕೆಯಲ್ಲಿ ಅನುಮಾ ನವೇನಿಲ್ಲ. ಇವರನ್ನು ಶಾಂತಗೊಳಿಸುವುದರಿಂದ ಹಾನಿಗಿಂತ ಲಾಭವೇ ಹೆಚ್ಚು ಇವರಲ್ಲಿ ಒಂದೇ ವಿಶೇಷ. ರಾಕ್ಷಸರು ತಮ್ಮ ಕ್ರೂರ ಸ್ವಭಾವ ವನ್ನು ಬಿಡುತ್ತಿರಲಿಲ್ಲ. ವಿನಾಯಕಾದಿಗಳು ಪ್ರಸನ್ನರಾಗುತ್ತಿದ್ದರು. ವೇದ ದಲ್ಲಿ ರಾಕ್ಷಸರನ್ನು ದೂರ ಓಡಿಸಬಹುದೆಂಬ ಉಲ್ಲೇಖವಿದೆ. ವಿನಾಯ ಕಾದಿಗಳು ಕೇವಲ ಪೂಜಾದಿಗಳಿಂದ ಸಂತುಷ್ಟರಾಗುತ್ತಿದ್ದರು. ಮಂಗಳ ಕಾರ್ಯಗಳಲ್ಲಿ ಮೊದಲು ವಿನಾಯಕನನ್ನು ಪೂಜಿಸಿದರೆ ನಿರ್ವಿಘ್ನವಾಗಿ ಕಾರ್ಯ ಸಮಾಪ್ತವಾಗುತ್ತಿತ್ತು. ಈ ಭಾವನೆ ಬರಬರುತ್ತಾ ದೃಢಮೂ ಲವಾಯಿತು. ಮಹಾನಿರ್ವಾಣ ತಂತ್ರದ ಗುರುದೀಕ್ಷಾ ಕರ್ಮವು ಇದಕ್ಕೆ ಸಾಕ್ಷಿಯಾಗಿದೆ. ಪ್ರಧಾನ ಕಾರ್ಯಕ್ಕಿಂತ ಒಂದು ದಿನ ಮುಂಚಿತವಾಗಿ ವಿನಾಯಕನನ್ನು ಪೂಜಿಸಲಾಗುತ್ತಿತ್ತು. ಅಂತ್ಯದಲ್ಲಿ ವಿಘ್ನರಾಜ ಕ್ಷಮಸ್ವ ಎಂದು ಹೇಳಿ ವಿಸರ್ಜಿಸುತ್ತಿದ್ದರು. ನಿನಗೆ ಕೊಡಬೇಕಾದ ಪೂಜೆಯನ್ನು (ಲಂಚ) ನಿನಗೆ ಕೊಟ್ಟಿರುತ್ತೇನೆ; ನಿನ್ನಿಂದ ಈಗ ಕೆಲಸವೇನಿಲ್ಲ. ಮಂಗಳ ಕಾರ್ಯದಲ್ಲಿ ತೊಂದರೆಯನ್ನುಂಟುಮಾಡಬೇಡವೆಂಬುದೇ ಇದರ ಚರಿ ತಾರ್ಥ. ಇಲ್ಲಿ ಅವನ ಕೆಲಸ ಮಂಗಳವನ್ನುಂಟುಮಾಡುವುದಲ್ಲ, ಆದರೆ ಅಮಂಗಳವನ್ನುಂಟುಮಾಡದಿರುವುದು. ಕ್ರಮವಾಗಿ ಎಲ್ಲಾ ಮಂಗಳ ಕಾರ್ಯಗಳಲ್ಲಿ ಶಾಂತಿ ಪ್ರದಾನಮಾಡುವವನಾದ. ಅನಂತರ ಪೂಜಿಸಿದ ವರಿಗೆ ಅಮಂಗಳ ಅಕರ್ತನಾಗಿದ್ದವನು ಸಾವಕಾಶವಾಗಿ ವಿಘ್ನವನ್ನು ಹೋಗಲಾಡಿಸುವವನೂ ಮತ್ತು ಮಂಗಳವನ್ನುಂಟುಮಾಡುವವನೂ ಆದನು.

ಗಣೇಶನ ಹೆಸರುಗಳು ಯೌಗಿಕಾರ್ಥಗಳಿಗೆ ಅನುಗುಣಗಳಾಗಿವೆ. ಶಂಕರ ಸುತ, ಗಜವಕ್ತ್ರ, ಅಮೋಘ, ತ್ರಿಲೋಚನ, ಭಕ್ಷ್ಯಪ್ರಿಯ ಆಖುರಥ ಇತ್ಯಾದಿಗಳು ಆ ಗುಂಪಿಗೆ ಸೇರಿದವುಗಳಾಗಿವೆ. ಹರಿದ್ರಾ ಗಣಪತಿ, ಪಿಂಗಲ ಗಣಪತಿ, ಉಚ್ಛಿಷ್ಟ ಗಣಪತಿಗಳು ಅವನ ಜನ್ಮದ ಸ್ಥಿತಿಯನ್ನು ತೋರಿಸುತ್ತವೆ. ಇವು ಲೌಕಿಕಗಳು. ವಿನಾಯಕರಲ್ಲಿ ಒಬ್ಬನ ಹೆಸರು ಕೂಷ್ಮಾಂಡ ಎಂದಿದೆ. ಇದು ಗ್ರಾಮ್ಯ ಶಬ್ದ. ಶಾಲ ಕಟಂಕಟ ಮತ್ತು ಪಿಚಂಡಲ ಇವುಗಳು ಅನಾರ್ಯ ಶಬ್ದಗಳೆಂದು ಕಾಣುತ್ತವೆ. ಕಾಶಿಯ ಪುರಾಣ ಪ್ರಸಿದ್ಧ ಗಣಪತಿಯ ಹೆಸರು ಢುಂಢಿ ಎಂದಿದೆ. ಇದು ಪ್ರಾಕೃತ ಶಬ್ದ. ಮಹಾಭಾರತದಲ್ಲಿ ಶಾಲಕಟಂಕಟ ಎಂಬ ರಾಕ್ಷಸನ ಹೆಸರು ಬರುತ್ತದೆ. ಶಾಲಕಟಂಕಟ ಶಬ್ದಕ್ಕೂ ಶಾಲಕಟಂಕಟ ಶಬ್ದಕ್ಕೂ ಸಾಮ್ಯವಿದೆ.

ಆರ್ಯರ ದೇವಪರಿವಾರದಲ್ಲಿ ಗಣೇಶನು ಬಲಾತ್ಕಾರವಾಗಿ ಪ್ರವೇಶಿಸಿ ಅನೇಕ ಬದಲಾವಣೆಗಳನ್ನು ಹೊಂದಿದನು. ವಿಘ್ನಗಳ ಸಂಖ್ಯೆ ಇಷ್ಟೇ ಎಂದು ಹೇಳಲು ಸಾಧ್ಯವಿಲ್ಲ. ಜೀವನದಲ್ಲಿ ಪದೇಪದೆ ವಿಘ್ನಗಳನ್ನು ಎದುರಿಸಬೇಕಾಗುತ್ತದೆ. ಆದುದರಿಂದ ವಿನಾಯಕರು ಅಸಂಖ್ಯಾತರೆಂದು ಹೇಳಿದೆ. ಪ್ರತಿಯೊಂದು ಹಳ್ಳಿ, ಜಾತಿ ಅಥವಾ ಗುಂಪಿಗೆ ಒಬ್ಬೊಬ್ಬ ವಿನಾಯಕರಿದ್ದಿರಬೇಕು. ಇಂದು ಕೆಲವು ಹಳ್ಳಿಗಳಲ್ಲಿ ಬೇರೆ ಬೇರೆ ಗ್ರಾಮದೇವತೆಗಳಿದ್ದಾರೆ. ದೇವತೆಗಳು ಅಸಂಖ್ಯಾತ ವಿನಾಯಕರನ್ನು ನೋಡಿ ಹೆದರಿದರೆಂದು ವಾರಾಹ ಪುರಾಣದಲ್ಲಿ ಹೇಳಿದೆ. ಒಂದು ಪಕ್ಷ ಇವರನ್ನೆಲ್ಲಾ ಪೂಜಿಸಬೇಕೆಂದರೆ ಉಳಿದ ದೇವತೆಗಳನ್ನು ಪೂಜಿಸಲು ಸಮಯವಿಲ್ಲದಂತಾಗುತ್ತದೆ. ಅದಕ್ಕೋಸ್ಕರ ನಾಲ್ಕು ಜನ ವಿನಾಯಕರುಗಳನ್ನು ಆರಿಸಿಕೊಳ್ಳಲಾಗಿದೆ. ಇವರು ಅನಾರ್ಯ ದೇವತೆಗಳಲ್ಲಿ ಪ್ರಸಿದ್ಧಿ ಹೊಂದಿದವರಾಗಿರಬೇಕು. ವಿಘ್ನಕಾರಿಗಳಲ್ಲಿ ಮಿತ, ಸಮ್ಮಿತ, ಕೂಷ್ಮಾಂಡ ಮತ್ತು ಶಾಲಕಟಂಕಟರು ಮುಖ್ಯರು. ಬರಬರುತ್ತಾ

ನಾಲ್ಕು ಜನ ವಿನಾಯಕರಿಗೆ ಬದಲಾಗಿ ಒಬ್ಬನೇ ವಿನಾಯಕನಾದ. ನಾಲ್ಕು ಜನ ವಿನಾಯಕರಲ್ಲಿ ಒಬ್ಬನಿಗೆ ಪ್ರಧಾನ ಸ್ಥಾನ ಸಿಕ್ಕಿರಬೇಕು. ಅನಂತರ ನಾಲ್ಕು ಜನರನ್ನೂ ಸೇರಿಸಿ ಒಂದೇ ವಿಗ್ರಹಮಾಡಿರಬೇಕು. ಕೆಲವು ವಿಶೇಷ ಸಮಯದಲ್ಲಿ ನಾಲ್ಕುಜನ ವಿನಾಯಕರನ್ನು ಹೇಳಿದರು. ಬಹುತೇಕವಾಗಿ ಒಬ್ಬ ವಿನಾಯಕನ ಅಥವಾ ಗಣಪತಿಯ ಅಸ್ತಿತ್ವವನ್ನು ಅನುಮೋದಿಸಿದರು. ಪುರಾಣದ ರೀತಿಯಾಗಿ ಒಬ್ಬನಿಗಿಂತ ಮತ್ತೊಬ್ಬ ವಿನಾಯಕನು ಭಿನ್ನನೆಂದು ತಿಳಿದುಬರುತ್ತದೆ. ಆದರೆ ಅರ್ವಾಚೀನರ ಅಭಿಪ್ರಾಯದಂತೆ ಒಬ್ಬನೇ ವಿನಾಯಕನೆಂದು ಭಿನ್ನ ಭಿನ್ನ ಸಮಯದಲ್ಲಿ ವಿಶೇಷ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆಂದು ತಿಳಿಯಬಹುದು. ಹೇರಂಬ ಗಣಪತಿಯು ಮುಖ್ಯ ವಿನಾಯಕನ ಭೇದ ಅಥವಾ ಅವನ ಅಭಿವ್ಯಕ್ತ ರೂಪವೆಂದು ತಿಳಿಯಬಹುದು.

ವಿನಾಯಕನ ಅಂಗಾಂಗಗಳಲ್ಲಿ ಕೆಲವು ಬದಲಾವಣೆಗಳಾದವು. ಅನಾರ್ಯರು ಪೂಜಿಸುತ್ತಿದ್ದ ವಿನಾಯಕ ಗಜವದನನಾಗಿದ್ದ. ಎಲ್ಲಾ ಕಡೆಗಳಲ್ಲಿ ಒಂದೇ ರೀತಿಯ ಮೂರ್ತಿ ಇರಲಿಲ್ಲ. ವಿನಾಯಕನು ಒಬ್ಬನೇ ಎಂದಾದಮೇಲೆ ಅವನ ವಿಗ್ರಹವೂ ಒಂದಾಯಿತು. ಉದಾಹರಣೆಗೆ ಹಿಂದಿನ ಸೊಂಡಿಲು ಮತ್ತು ದಂತದ ಕಥೆಗಳನ್ನು ನೋಡಬಹುದು. ಎಲ್ಲಾ ಕಥೆಗಳಲ್ಲಿಯೂ ಅವನು ಮನುಷ್ಯನಂತೆ ಹುಟ್ಟಿದ್ದನು. ಅನಂತರ ಸೊಂಡಿಲನ್ನು ಸೇರಿಸಲಾಯಿತು. ಒಂದು ಕಥೆಯಲ್ಲಿ ಮಾತ್ರ ಐದು ಸೊಂಡಿಲು ಸಹಿತವಾಗಿಯೇ ಹುಟ್ಟಿದ್ದ ಒಂದನ್ನು ಬಿಟ್ಟು ಉಳಿದವು ಗಳನ್ನು ಕತ್ತರಿಸಲಾಯಿತು. ದಂತಗಳು ಎರಡಿದ್ದವು ಕೊನೆಯಲ್ಲಿ ಒಂದು ಉಳಿಯಿತು. ಆರ್ಯರ ದೇವತೆಗಳು ಮನುಷ್ಯರಂತೆ ಆಕೃತಿ ಉಳ್ಳವರೆಂದು ನಮ್ಮ ನಂಬಿಕೆ. ಈ ಕಥೆಗಳಲ್ಲಿ ಸಾವಿರಾರು ವರ್ಷಗಳ ಇತಿಹಾಸವು ಅಡಗಿದೆ. ಮಾನವಾಕೃತಿಯ ದೇವತೆಗಳ ಮಧ್ಯೆ ಗಜಮುಖ ನಾದ ದೇವನೊಬ್ಬ ಬಂದು ಕುಳಿತ. ಮೊದಲು ಆರ್ಯರು ಈ ಪಶು

ಸಿರಸ್ಸಿನವನನ್ನು ವಿರೋಧಿಸಲು ಅಸಮರ್ಥರಾಗಿ ಅವನ ಅಸ್ತಿತ್ವವನ್ನು ಒಪ್ಪಿಕೊಂಡರು. ಕೆಲವು ಕಡೆ ಒಂದು ಸಿರಸ್ಸಿನ ಮತ್ತೆ ಕೆಲವು ಕಡೆ ಅನೇಕ ಸಿರಸ್ಸಿನ, ಕೆಂಪಾದ, ಕಪ್ಪಾದ ವಿಗ್ರಹಗಳನ್ನು ಪೂಜಿಸುತ್ತಿದ್ದರು. ಆರ್ಯರು ಅಂದಿನ ಸಮಯದಲ್ಲಿ ಪ್ರಚಲಿತವಾಗಿದ್ದ ಒಬ್ಬ ವಿನಾಯಕ ನನ್ನು ಆರಿಸಿಕೊಂಡು ಉಳಿದವುಗಳನ್ನು ಅದರಲ್ಲಿಯೇ ವಿಲೀನಗೊಳಿಸಿ ದರು. ಅವನ ವಿಲಕ್ಷಣಾಂಗಗಳಿಗೆ ಒಂದೊಂದು ಕಥೆ ಇದ್ದೇ ಇದೆ.

ವಿನಾಯಕನ ಸ್ವರೂಪವು ಸಂಸ್ಕಾರ ಹೊಂದಿದಂತೆ ಅವನ ಸ್ವಭಾ ವವು ಸಂಸ್ಕೃತವಾಯಿತು. ಸ್ವಭಾವತಃ ವಿಘ್ನವನ್ನುಂಟುಮಾಡುವವನು ಕ್ರಮೇಣ ವಿಘ್ನಹರ ಹಾಗು ಮಂಗಳ ಪ್ರದಾತನಾದನು. ಪ್ರಸನ್ನವದ ನರು, ಮಾನವ ಹಿತೈಷಿಗಳು ಮತ್ತು ಧರ್ಮ ಪ್ರೋತ್ಸಾಹಕರೇ ದೇವತೆ ಗಳೆಂದು ಆರ್ಯರು ಹೇಳುತ್ತಾರೆ. ಆರ್ಯ ಧರ್ಮದಲ್ಲಿ ಗಣೇಶನು ಸೇರಿ ಪರಿಷ್ಕೃತನಾದನು. ಅವನು ಅಸಿದ್ಧಿ ಪ್ರವೃತ್ತಿಗಳನ್ನು ಬಿಟ್ಟು ಸಿದ್ಧಿದಾತನಾದನು. ಅವನ ಸೈನ್ಯವು ಎಷ್ಟೇ ಕ್ರೂರಿಯಾಗಿದ್ದರೂ ಗಣ ಪತಿಯು ಯಾವಾಗಲೂ ಪ್ರಸನ್ನವದನನಾಗಿದ್ದಾನೆ. ಅವನ ದುಷ್ಕೃತ್ಯ ಗಳು ಮರೆತುಹೋಗಿವೆ. ಗಣೇಶನು ಮಂಗಳವನ್ನುಂಟುಮಾಡುವವ ನೆಂದು ಮತ್ತು ಸುಖ ಸಮೃದ್ಧಿ ಹಾಗು ವಿದ್ಯಾ ದಾತನೆಂದು ಬಹುಜನರ ತಿಳಿವಳಿಕೆಯಾಗಿದೆ. ಆದರೆ ಮೊದಲು ಅವನನ್ನು ಪೂಜಿಸದಿದ್ದರೆ ಪೂಜಾ ಫಲಗಳನ್ನು ಅಪಹರಿಸುತ್ತಾನೆಂಬುದು ತಿಳಿಯದೆ ಇರಬಹುದು. ಅಪದೇ ವತೆಯಾದ ವಿನಾಯಕನನ್ನು ಅನೇಕ ವರ್ಷಗಳ ಕೆಳಗೆ ಬುದ್ಧಿಜೀವಿಗಳು ವೈದಿಕ ಆರ್ಯದೇವತೆಗಳ ಅಚ್ಚಿನಲ್ಲಿ ಹಾಕಿ ಸಂಸ್ಕರಿಸಿದರು. ಪ್ರಾಚೀನ ಸಂಸ್ಕೃತ ಗ್ರಂಥಗಳ ಆದಿಯಲ್ಲಿ ಗಣಪತಿಯ ಮಂಗಳಾಚರಣೆ ಇರುವು ದನ್ನು ನೋಡಬಹುದು. ತುಲಸೀದಾಸರು ತಮ್ಮ 'ವಿನಯ ಪತ್ರಿಕಾ' ಎಂಬ ಗ್ರಂಥದಲ್ಲಿ "ಗಾಯಿ ಯೆ ಗಣಪತಿ ಜಗವಂದನ ಶಂಕರ ಸುವನ ಭವಾನೀ ನಂದನ" ಎಂದು ಹಾಡಿದ್ದಾರೆ. ತುಲಸೀದಾಸರ ಗಣೇಶ ಕೇವಲ ಮಂಗಳ ಮೂರ್ತಿ ಹಾಗು ಮಂಗಳ ಕರ್ತನಾಗಿದ್ದಾನೆ.

ಶ್ರುತಿಯು ೩೩ ದೇವತೆಗಳಿದ್ದಾರೆಂದು ಸಾರುತ್ತಲಿದೆ. ಹಿಂದು ಗಳು ಬೇರೆ ಬೇರೆ ದೇವತೆಗಳನ್ನು ಪೂಜಿಸಿದರೂ ಆ ದೇವತೆಗಳು ಈ ೩೩ ರಲ್ಲಿ ಸೇರದಿದ್ದರೆ ಅವರಿಗೆ ಶಾಂತಿ ಇರುತ್ತಿರಲಿಲ್ಲ. ಅಶಿಕ್ಷಿತ ಜನ ಸಮುದಾಯವು ಇದಕ್ಕೆ ಚಿಂತಿಸುವುದಿಲ್ಲ. ವೈದಿಕ ವಿದ್ವತ್ಸಮಾಜದಲ್ಲಿ ಗಣೇಶನು ಪ್ರವೇಶಿಸಿದಮೇಲೆ ಅವನಿಗೆ ಒಂದು ಸ್ಥಾನವನ್ನು ಕೊಡ ಬೇಕಾಗಿ ಬಂದಿತು. ಅವನು ಕ್ರೂರಿಯಾದುದರಿಂದ ಹೆದರಿ ಪೂಜಿಸುತ್ತಿದ್ದರು. ಪ್ರೇಮದಿಂದ ಯಾರೂ ಪೂಜಿಸುತ್ತಿರಲಿಲ್ಲ. ಆದುದರಿಂದ ಉಗ್ರಸ್ವಭಾವದ ರುದ್ರನ ಗಣದಲ್ಲಿ ಅವನಿಗೆ ಸ್ಥಾನಕೊಡಲಾಯಿತು. ಪುರಾಣಗಳಲ್ಲಿ ರುದ್ರನ ಪುತ್ರನೆಂದು ಹೇಳಿದೆ. ರುದ್ರನ ಸೈನ್ಯದಲ್ಲಿ ಬಹಳ ಅವಕಾಶವಿದ್ದಿತು. ಶುಕ್ಲಯಜುರ್ವೇದದ ೧೬ನೇ ಅಧ್ಯಾಯದ ೫೪ನೇ ಮಂತ್ರದಲ್ಲಿ ಈ ಅಂಶವನ್ನುಕಾಣಬಹುದು; 'ಅಸಂಖ್ಯಾತಾ ಸಹಸ್ರಾಣಿ ಯೆ ರುದ್ರಾ ಅಧಿಭೂಮ್ಯಾಮ್' ಪೃಥ್ವಿಯಲ್ಲಿ ಅಸಂಖ್ಯಾತ ರುದ್ರರಿದ್ದಾರೆ. ಅವರುಗಳಿಗೆ ನಾವು ಶಸ್ತ್ರಾಸ್ತ್ರಗಳನ್ನು ಅನುಗ್ರಹಿಸುತ್ತೇವೆ ಮತ್ತು ೫೫ನೇ ಮಂತ್ರದಿಂದ ೬೦ನೇ ಮಂತ್ರದವರೆವಿಗೆ ಆಕಾಶದಲ್ಲಿ ಸಂಚರಿಸುವ ರುದ್ರರ ಉಲ್ಲೇಖವಿದೆ. ಅನಂತರ ೬೩ನೇ ಮಂತ್ರದಲ್ಲಿ 'ಯ ಏತಾವಂತಶ್ಚ ಭೂಯಾಸಶ್ಚ' ಎಂದು ಮೇಲೆ ಹೇಳಿರುವ ರುದ್ರರಲ್ಲದೆ ಇನ್ನು ಅನೇಕ ರುದ್ರರನ್ನು ಹೇಳಿದೆ. ಈ ಅಸಂಖ್ಯಾತ ಸಮೂಹದಲ್ಲಿ ಗಣಪತಿಯು ಅನಾಯಾಸವಾಗಿ ಸೇರಿಹೋದ. ರುದ್ರನು ಲಯಕರ್ತನು. ಅವನು ಜೀವಿಗಳ ಕರ್ಮಗಳಿಗನುಗುಣವಾಗಿ ಅವರನ್ನು ಸಂಹರಿಸುತ್ತಾನೆ. ೬೨ನೇ ಮಂತ್ರವು ಮೇಲಿನ ಅಭಿಪ್ರಾಯವನ್ನೇ ಹೇಳುತ್ತದೆ. 'ಯೇಽನ್ನೇಷು ವಿವಿಧ್ಯಂತಿ ಪ್ರಾತ್ರೇಷು ಪಿಬತೋ ಜನಾನ್' ಅನ್ನ ಮತ್ತು ನೀರು ಮೊದಲಾದ ಪಾನೀಯ ಪಾತ್ರೆಗಳಲ್ಲಿ ಸೇರಿಕೊಂಡು ರೋಗಗಳನ್ನುಂಟುಮಾಡಿ ಜನಗಳಿಗೆ ತೊಂದರೆಗಳನ್ನು ಕೊಡುತ್ತಿದ್ದವರು ಆ ವಿನಾಯಕರೆ ಆಗಿದ್ದಾರೆ. ಅಸಂಖ್ಯಾತ ವಿನಾಯಕರುಗಳಲ್ಲಿ

ಇವರೂ ಸಹ ಸೇರಿದವರಾಗಿದ್ದರು. ಇವರು ಸ್ವಭಾವತಃ ಕ್ರೂರಿಗಳೇ ಆದರೆ ವಿದ್ವಜ್ಜನರು ಆ ಸ್ವಭಾವವನ್ನು ಹೋಗಲಾಡಿಸಿದರು. ಮೊದಲು ವಿನಾಯಕನು ರುದ್ರನ ಗಣದಲ್ಲಿ ಸೇರಿದನು. ಅನಂತರ ರುದ್ರನ ಪುತ್ರ ರುದ್ರನ ಅಂಶಾವತಾರ, ರುದ್ರನ ಅಭಿವ್ಯಕ್ತ ಸ್ವರೂಪನೆಂದು ಪರಿಗಣಿಸಲ್ಪಟ್ಟನು. ಕೆಲವು ಗೌಣ ವಿಚಾರಗಳೂ ಸಹ ಈ ಏಕೀಕರಣವನ್ನು ಸಮರ್ಥಿಸುತ್ತವೆ.

ಗಣಪತಿಗೂ ಇಲಿಗೂ ಬಹಳ ಸಂಬಂಧವಿದೆ. ಹಿಂದಿನ ಕಥೆಗಳಲ್ಲಿ ಮೊದಲು ಇಲಿಯು ಅವನಲ್ಲಿರಲಿಲ್ಲ. ಅನಂತರ ಅವನ ವಾಹನವಾಗಿ ಬಂದಿತು. ಯಜುರ್ವೇದದ ಒಂದು ಮಂತ್ರವನ್ನು ಹಿಂದೆ ಹೇಳಿದೆ. ಅದರಲ್ಲಿ ಇಲಿ ರುದ್ರನ ಪಶು ಎಂದಿದೆ. ಇದು ಒಂದು ಸಂಬಂಧವೇ. ಹೆಸರಿನ ಸಮಾನತೆಯೂ ಸಹ ಇದೆ. ವಾಲ್ಮೀಕಿ ರಾಮಾಯಣದಲ್ಲಿ:—

**ಗಣೇಶೋ ಲೋಕಶಂಭುಶ್ಚ ಲೋಕಪಾಲೋ ಮಹಾಭುಜಃ ।**
**ಮಹಾಭಾಗೋ ಮಹಾಶೂಲೀ ಮಹಾದಂಷ್ಟ್ರೀ ಮಹೇಶ್ವರಃ ॥**

ಎಂದು ಶಿವನಿಗೆ ಹೇಳಿದೆ.

ಕಲ್ಕತ್ತೆಯ ವಸ್ತುಸಂಗ್ರಹಾಲಯದಲ್ಲಿ ೬೩ ರಿಂದ ೧೩೩ ನೇ ವಿಕ್ರಮ ಸಂವತ್ಸರದಲ್ಲಿ ಚಕ್ರವರ್ತಿಯಾಗಿದ್ದ ಹುವಿಷ್ಕನ ತಾಮ್ರ ಶಾಸನದ ಒಂದು ನಾಣ್ಯವಿದೆ. ಅದರ ಒಂದುಕಡೆ ಹುವಿಷ್ಕನ ಚಿತ್ರವಿದೆ. ಮತ್ತೊಂದುಕಡೆ ಒಬ್ಬ ಸೈನಿಕನ ಚಿತ್ರವಿದೆ. ಸೈನಿಕನ ಕೈಯಲ್ಲಿ ಒಂದು ದೊಡ್ಡ ಧನುಸ್ಸಿದೆ. ಅವನ ಹೆಸರು ಗಣೇಶನೆಂದು ಪ್ರಾಚೀನ ಬ್ರಾಹ್ಮೀ ಲಿಪಿಯಲ್ಲಿ ಬರೆದಿದೆ. ಅದು ಶಂಕರನ ಚಿತ್ರವಿರಬೇಕು. ಏತಕ್ಕೆಂದರೆ ಬೇರೆ ಬೇರೆ ನಾಣ್ಯಗಳಲ್ಲಿ ಶಂಕರನ ಆಯುಧ ತ್ರಿಶೂಲವಿದೆ. ಒಂದು ಕಡೆ ಯವನಾಕ್ಷರದಲ್ಲಿ ಓಯಶೋ (ಭವೇಶ) ಎಂದು ಬರೆದಿದೆ. ಶಂಕರನ ಆಯುಧಗಳಲ್ಲಿ ಧನುರ್ಬಾಣಗಳೂ ಸೇರಿವೆ. ಧನ್ವೀ, ಪಿನಾಕಿನೀ ಎಂದು ಅವುಗಳ ಹೆಸರು.

ಗಣಪತಿಯು ದೇವತೆಗಳಲ್ಲಿ ಗಣನೆಗೆ ಬಂದಾಗ ಮಂತ್ರದ್ರಷ್ಟ ಋಷಿಗಳು ಮಂತ್ರಗಳ ಜನಕರಾಗಿ ಹೋಗಿದ್ದರು. ಗಣಪತಿಯ ಪೂಜೆಗೆ ಆಗ ಮಂತ್ರಗಳಿರಲಿಲ್ಲ. ಮಂತ್ರಗಳಿಲ್ಲದೇ ಪೂಜೆಯನ್ನು ಮಾಡುವಂತಿರ ಲಿಲ್ಲ. ಲೌಕಿಕ ಸಂಸ್ಕೃತದಲ್ಲಿ ಶ್ಲೋಕಗಳನ್ನು ಗಣಪತಿಯ ಪರವಾಗಿ ರಚಿಸಿದರು. ಆದರೂ ವೇದಮಂತ್ರಗಳ ಅಭಾವದಿಂದ ಕಾರ್ಯಗಳು ಪೂರ್ಣವಾದರೂ ಮನಸ್ಸಿಗೆ ಸಮಾಧಾನವುಂಟಾಗುತ್ತಿರಲಿಲ್ಲ. ಯಾವ ಮಂತ್ರದಲ್ಲಿ ಗಣಪತಿ ಶಬ್ದದ ಪ್ರಯೋಗವಿರುತ್ತಿತ್ತೋ ಆ ಮಂತ್ರಗಳೆ ಲ್ಲವೂ ಗಣೇಶನ ಪರಗಳೆಂದಾದವು. ವೇದಗಳಲ್ಲಿ ಎಲ್ಲಿಯೂ ಆ ಮಂತ್ರ ಗಳು ಗಣೇಶನ ಪರಕಗಳೆಂದು ಹೇಳಿಲ್ಲ. ಶ್ರೌತಕಾಲದಲ್ಲಿಯೂ ಅವುಗಳು ಗಣೇಶವಾಚಕಮಂತ್ರಗಳೆಂದು ಪ್ರತಿಪಾದಿಸಿಲ್ಲ. ಮೊದಲನೇ ಅಧ್ಯಾಯ ದಲ್ಲಿ ಹೇಳಿದ ಗಣಪತಿ ಶಬ್ದಪ್ರಯೋಗವು ಬೃಹಸ್ಪತಿಗೆ ಸಂಬಂಧಿಸಿದುದು. ಕೆಲವರ ಅಭಿಪ್ರಾಯದಂತೆ ಬೃಹತಾಂ ಪತಿ ವಾಣಿಯ ಪತಿ ಮಂತ್ರದ ಸ್ವಾಮಿ ಮತ್ತು ಅವನ ಹೆಸರೇ ಬೃಹಸ್ಪತಿ ಅಂದರೆ ವಿನಾಯಕನಾಗಿ ದ್ದಾನೆ. ಒಂದು ಪಕ್ಷ ಈ ಅಭಿಪ್ರಾಯವನ್ನು ಒಪ್ಪಿದರೂ ಸಹ ಯಜು ರ್ವೇದದ ಅಶ್ವಮೇಧಾಧ್ಯಾಯದಲ್ಲಿ ಯಾವರೀತಿಯಾಗಿಯೂ ಗಣೇಶ ನನ್ನು ಸೂಚಿಸುವುದೆಂದು ಒಪ್ಪಲಾಗುವುದಿಲ್ಲ. ಅಶ್ವಕ್ಕೆ ಗಣೇಶನೆಂದಾ ಗಲೀ ಗಣೇಶನಿಗೆ ಅಶ್ವವೆಂದಾಗಲೀ ಒಪ್ಪುವುದು ಅನರ್ಥವಾಗುವುದು. 'ಗಣಾನಾಂ ತ್ವಾ' ಮಂತ್ರವು ಗಣೇಶನಿಗೆ ಸಂಬಂಧಿಸಿದುದಲ್ಲ. ಆದರೂ ಹಿಂದೆ ಹೇಳಿದ ಎರಡು ನೂರು ಮಂತ್ರಗಳು ಅವನಿಗೆ ಸಂಬಂಧಿಸಿದವು ಗಳೆಂದಾಗಿವೆ. ಅವನ ಹೆಸರಿನಲ್ಲಿ ಗಾಯತ್ರೀ ಛಂದಸ್ಸಿನಲ್ಲಿ ಮಂತ್ರ ರಚನೆಯೂ ಆಯಿತು. ಮತ್ತು ಅರ್ವಾಚೀನ ಗಣಪತ್ಯುಪನಿಷತ್ತಿನಲ್ಲಿ ಆ ಮಂತ್ರವನ್ನು ಸೇರಿಸಲಾಯಿತು.

ದೇವತ್ವವನ್ನು ಹೊಂದಿದ ಮೇಲೆ ಗಣಪತಿಯು ಬಹಳ ಆಧ್ಯಾ ತ್ಮಿಕ ಉನ್ನತಿಯನ್ನು ಮಾಡಿದನು. ವೈದಿಕ ದೇವತೆಗಳು ಜಗತ್ತಿನ

ಸಂಚಾಲನಾಶಕ್ತಿಗಳು. ಆದಿಚಿಚ್ಛಕ್ತಿಯು ಭೇದಗಳ ಪ್ರತಿಬಿಂಬ ಹಾಗು ಘನೀಭೂತ ವಿಗ್ರಹವಾಗಿದೆ. ಪರಾಶಕ್ತಿಯು ಎಲ್ಲಿ ಕಲ್ಯಾಣಕಾರಿಯೋ ಅಲ್ಲಿಯೇ ಅಕಲ್ಯಾಣಕಾರಿಣಿಯೂ ಆಗಿದ್ದಾಳೆ. ಸುಕೃತಿಗಳ ಮನೆಗಳಲ್ಲಿ ದುಷ್ಕೃತಿಯಾಗಿ ವಾಸಿಸುತ್ತಾಳೆ. ವಿದ್ಯಾರೂಪಿಣಿಯಾಗಿರುವವಳು ಅವಿದ್ಯಾರೂಪಳೂ ಆಗಿದ್ದಾಳೆ. ಮೋಹಜನಕಳು ಹಾಗು ಮೋಹ ನಾಶಕಳೂ ಸಹ ಆಗಿದ್ದಾಳೆ. ಜೀವನ ಕರ್ಮಫಲದುಂತೆ ಮಂಗಳ ಮತ್ತು ಅಮಂಗಳರೂಪಿಯಾಗಿ ಕಾಣಿಸಿಕೊಳ್ಳುತ್ತಾಳೆ. ಆದುದರಿಂದ ತಂತ್ರಗಳಲ್ಲಿ ವಿಘ್ನಗಳನ್ನು ದೇವತೆ ಮತ್ತು ಈಶ್ವರಿಯ ಭೇದವಿಶೇಷವೆಂದು ಹೇಳಿದೆ. ಈ ವಿಘ್ನಗಳ ಮೂರ್ತರೂಪವೇ ಗಣಪತಿ. ಗಣಪತಿಯ ಪೂಜೆಯಿಂದ ಈಶ್ವರಿಯನ್ನು ಪೂಜಿಸಿದಂತೆಯೆ. ಉಪಾಸಕರು ಸ್ಥಿರಮನಸ್ಸಿನಿಂದ ಉಪಾಸಿಸಿದರೆ ಅವರ ಚಿತ್ತವೃತ್ತಿಯು ಶುದ್ಧವಾಗುತ್ತದೆ. ದೇವತೆಗಳು ವಿಘ್ನರೂಪಗಳನ್ನು ಸಿದ್ಧಿರೂಪದಲ್ಲಿ ಅನುಗ್ರಹಿಸುತ್ತಾರೆ. ಅವಿದ್ಯೆಗೆ ಬದಲಾಗಿ ವಿದ್ಯೆಯುಂಟಾಗುತ್ತದೆ. ಮನೋವಿಜ್ಞಾನದ ಅನುಭವ ಸಿದ್ಧಾಂತದ ಪ್ರಕಾರ ಬುದ್ಧಿಶಕ್ತಿಯು ಕೆಟ್ಟ ಪ್ರವೃತ್ತಿಗಳಲ್ಲಿ ವ್ಯಯವಾಗುತ್ತಿದ್ದರೆ ಅದು ಒಳ್ಳೆಯ ಸ್ಥಿತಿಗೆ ಒಂದು ಒಳ್ಳೆಯ ಪ್ರವೃತ್ತಿಗಳನ್ನು ರೂಢಿಸಿಕೊಡುತ್ತದೆ. ಸತ್ವಗುಣವೆಂಬ ಅಂಕುಶದಿಂದ ಕಾಮ ಮತ್ತು ಕ್ರೋಧಗಳನ್ನು ಕಲ್ಯಾಣಸಾಧಕಗಳನ್ನಾಗಿ ಮಾಡಿಕೊಳ್ಳಬಹುದು. ಕಾಮ, ಕ್ರೋಧ, ಅಸೂಯಾದಿಗಳ ಪ್ರತೀಕಗಳಾದ ಮಾತೃಕೆಯರನ್ನು ಪೂಜಿಸುತ್ತಾರೆ. ಹಾಗೆಯೇ ವಿಘ್ನರಾಜನನ್ನೂ ಸಹ ಪೂಜಿಸುತ್ತಾರೆ. ಇದೇ ತಾಂತ್ರಿಕಪೂಜೆಯ ಆಧ್ಯಾತ್ಮಿಕ ರಹಸ್ಯ. ತಂತ್ರಗಳಲ್ಲಿ ' ಮ 'ಕಾರಗಳ ಉಪಯೋಗವನ್ನು ಹೇಳಿದೆ. ಇಲ್ಲಿ ಅವುಗಳ ವಿಚಾರ ಅಪ್ರಕೃತ. ಯಜುರ್ವೇದದ ಮಂತ್ರವು ಗಣಪತಿಯ ಪರವೆಂದು ಕೆಲವರು ತಿಳಿಯುತ್ತಾರೆ. ಅದು ಯಜಮಾನನ ಪತ್ನಿಯು ಸತ್ತಿರುವ ಅಶ್ವವನ್ನು ಪತಿರೂಪದಲ್ಲಿ ಆಹ್ವಾನಿಸುವ ಪ್ರಸಂಗವಾಗಿದೆ.

ಅನಾರ್ಯ ವಿನಾಯಕನಿಂದ ಆರ್ಯಗಣಪತಿ, ವಿಘ್ನರಾಜನಿಂದ ಸಿದ್ಧಿದಾತನೂ ಆದನು. ವೇದವು "ಸದೇವ ಸೌಮ್ಯ ಇದಮಗ್ರ ಆಸೀತ್" ಹೆ ಸೌಮ್ಯ! ಜಗತ್ತಿನ ಆರಂಭದಲ್ಲಿ ಕೇವಲ ಒಂದೇ ಒಂದು ವಸ್ತು ಇದ್ದಿತು. ಅದು ಸತ್ಸ್ವರೂಪವಾದುದೆಂದು ಹೇಳುತ್ತದೆ. ಈ ವಿಷಯವು ದರ್ಶನ ಮತ್ತು ಪುರಾಣ ಗ್ರಂಥಗಳಲ್ಲಿ ಹೇಳಿದೆ. 'ಸಪ್ತಶತೀ' ಎಂಬ ಗ್ರಂಥದಲ್ಲಿ ದೇವಿಯು "ಏಕೈವಾಹಂ ಜಗತ್ಯತ್ರ ದ್ವಿತೀಯಾ ಕಾ ಮಮಾ ಪರಾ" ಈ ಜಗತ್ತಿನಲ್ಲಿ ನಾನೊಬ್ಬಳೇ ಇದ್ದೇನೆ. ನನ್ನನ್ನು ಬಿಟ್ಟು ಎರಡನೆಯವಳು ಇಲ್ಲವೇ ಇಲ್ಲ, ಎಂದು ಹೇಳಿದ್ದಾಳೆ. ಶಕ್ತಿಯೇ ಸರ್ವಕ್ಕೂ ಕಾರಣಕರ್ತಳು. ಉಪದ್ರವಗಳನ್ನು ಉಂಟುಮಾಡುವವಳು ಈ ಆದಿಶಕ್ತಿಯೆ. ಪರಮ ಸದಾಶಿವನ ಅಭಿನ್ನ ರೂಪಳು. ಹಳದೀ ಜ್ವರದವನಿಗೆ ಜಗತ್ತೆಲ್ಲವೂ ಹಳದಿಯ ಹಾಗೆ ಕಾಣುವಂತೆ ಅಲ್ಪಬುದ್ಧಿ, ದುರ್ಬಲ, ಮೋಹಪೀಡಿತ ಜೀವಿಗಳಿಗೆ ಪದೇಪದೆ ಉಪದ್ರವಗಳ ಅನುಭವವುಂಟಾಗುತ್ತದೆ. ಅಲ್ಪವೀರ್ಯರು ನಿರ್ಬಾಧಿತವಾಗಿ ಸತ್ಕಾರ್ಯಗಳನ್ನು ಮಾಡಲಾರರು. ಆದರೆ ಉಪಾಸನೆಯ ಪ್ರಸಾದದ ಬಲದಿಂದ ಮೋಹಾದಿಗಳು ದೂರವಾಗುತ್ತವೆ. ಬಾಧಕವಾಗಿದ್ದಿದು ಸಾಧಕವಾಗುತ್ತದೆ ಮತ್ತು ಸನ್ಮಾರ್ಗದಲ್ಲಿ ನಡೆಯಲು ಸಮರ್ಥರಾಗುತ್ತಾರೆ. ದುರ್ಮಾರ್ಗದಲ್ಲಿ ಪ್ರವೃತ್ತವಾಗಿದ್ದ ಮನಸ್ಸು ಸತ್ಕರ್ಮಗಳಲ್ಲಿ ಮಗ್ನವಾಗುತ್ತದೆ. ಸಪ್ತಶತಿಯಲ್ಲಿ ಮಹಿಷಾಸುರನ ಕಥೆ ಇದೆ. ಮಹಿಷಾಸುರನು ಮಹಾಮೋಹರೂಪನು. ಅವನ ಚಿತ್ತವು ವಾಸನಾಸ್ವರೂಪವಾಗಿತ್ತು. ಅದು ಜಗತ್ತಿನ ಸಂಚಾಲನಾರೂಪವಾದ ಸರ್ವಶ್ರೇಷ್ಠಸಾತ್ವಿಕಶಕ್ತಿಗಳ ಮಾರ್ಗದಲ್ಲಿ ತೊಂದರೆಯನ್ನುಂಟುಮಾಡುತ್ತಿತ್ತು. ಆದುದರಿಂದ ಪರಾಶಕ್ತಿಯು ಮಹಿಷಾಸುರನನ್ನು ಕೊಂದಳು. ಆದರೆ ಅವನು ನರಕಕ್ಕೆ ಹೋಗಲಿಲ್ಲ. ಅವನನ್ನು ಸತ್ವಹೀನನನ್ನಾಗಿ ಮಾಡಲಿಲ್ಲ. "ಲೋಕಾನ್ ಪ್ರಯಾಂತಿ ರಿಪವೋಽಪಿ ಹಿ ಶಾಸ್ತ್ರಪೂತಾಃ"

ಶಸ್ತ್ರಗಳಿಂದ ಕೊಲ್ಲಲ್ಪಟ್ಟವನು ಶತ್ರುವಾಗಿದ್ದರೂ ಪವಿತ್ರನಾಗಿ ಉತ್ತಮ ಲೋಕವನ್ನು ಹೊಂದಲಿ ಎಂಬುದೇ ವಧೆಯ ಅರ್ಥ. ಮಹಿಷಾಧಿಗಳು ಇಂದ್ರಾದಿಗಳಂತೆ ಸ್ವರ್ಗಲೋಕದ ನಿವಾಸಿಗಳಾದರು. ಪ್ರತಿಯೊಬ್ಬ ಮನುಷ್ಯನು ಉಪಾಸನಾ ಬಲದಿಂದ ಆಂತರಿಕ ಆಧ್ಯಾತ್ಮಶಕ್ತಿಯನ್ನು ಪ್ರಬಲಗೊಳಿಸಿಕೊಳ್ಳುತ್ತಾನೆ. ಅದರ ಸಹಾಯದಿಂದ ದುಷ್ಟ ಪ್ರವೃತ್ತಿಗಳನ್ನು ನಾಶಮಾಡಿ ಸತ್ಪ್ರವೃತ್ತಿಗಳನ್ನಾಗಿ ಮಾಡುತ್ತಾನೆ. ಅಧೋಮುಖಿಗಳಾಗಿದ್ದ ಪ್ರೇರಣಾ ಶಕ್ತಿಗಳನ್ನು ಊರ್ಧ್ವಮುಖಿಗಳನ್ನಾಗಿ ಮಾಡುತ್ತಾನೆ. ಅನಂತರ ಕುಕರ್ಮ ಮತ್ತು ಸುಕರ್ಮ ಎಂಬ ಭೇದವು ನಾಶವಾಗಿ ಭೇದಾತೀತವಾದ ಸ್ಫೂರ್ತಿಶಕ್ತಿಯು ಉಳಿಯುತ್ತದೆ. ನನ್ನ ಅಭಿಪ್ರಾಯದಲ್ಲಿ ಜನಗಳು ವಿಘ್ನರಾಜ ವಿನಾಯಕನನ್ನು ದೇವತೆಯನ್ನಾಗಿ ಅಂಗೀಕರಿಸಿದ ಮೇಲೆ. ಎಲ್ಲಾ ಮಂಗಳಕಾರ್ಯಗಳಲ್ಲಿ ಮೊದಲು ಪೂಜಿಸುವುದು ಪ್ರಾರಂಭವಾಯಿತು. ಬುದ್ಧಿಜೀವಿಗಳು ಇದನ್ನು ವಿರೋಧಿಸುವುದು ವ್ಯರ್ಥವೆಂದು ತಿಳಿದು ವಿನಾಯಕನನ್ನು ಅದ್ವೈತ ತತ್ತ್ವಕ್ಕೆ ಅನುಗುಣವಾಗಿ ಸಂಸ್ಕರಿಸಿದರು. ಲೌಕಿಕ ರೂಢಿಗಳನ್ನು ವಿರೋಧಿಸುವುದು ಮೂರ್ಖತನವೆಂದು ತಿಳಿದು, ವಿನಾಯಕನನ್ನು ವಿಘ್ನಹಂತಕನೆಂದು ಕರೆದು ಶುದ್ಧ ಚಿನ್ಮಯ ಬ್ರಹ್ಮನಿಂದ ಭಿನ್ನನಲ್ಲವೆಂದು ಪ್ರತಿಪಾದಿಸಿದರು. ಶಿವೋಪಾಸಕರು ವೇದದ ಶಬ್ದಗಳಲ್ಲಿ "ಯಾತೇ ರುದ್ರ ಶಿವಾತನೂರಘೋರಾ ಪಾಪಕಾಶಿನೀ" ಹೇ ರುದ್ರ! ನಿನ್ನ ಅಘೋರವೂ, ಕಲ್ಯಾಣಮಯವೂ, ಪಾಪನಾಶಕವೂ ಆದ ಶರೀರವನ್ನು ನಮಗೆ ಅನುಗ್ರಹಿಸೆಂದು ಪ್ರಾರ್ಥಿಸುತ್ತಾರೆ. ಗಣೇಶನನ್ನು ಶಿವಸುತ ಎಂದು ಹೇಳಿರುವುದರಿಂದ ತಂದೆಯ ರೂಪದಲ್ಲಿ ಅವನನ್ನು ಸಮೀಕರಿಸಿದರೆ ಅವನಿಗೂ ಘೋರ, ಅಘೋರ ವಿಘ್ನಕಾರಿ ಮತ್ತು ವಿಘ್ನಹಾರಕ ಶರೀರಗಳು ಸ್ವಾಭಾವಿಕವಾದವುಗಳೆಂದು ಕಂಡುಬರುತ್ತವೆ.

ಯಾವ ತತ್ತ್ವವು ಆಧ್ಯಾತ್ಮಿಕ ಉನ್ನತಿಯಲ್ಲಿ ತೊಂದರೆಯನ್ನುಂಟು

ಮಾಡುವುದೋ ಆ ತತ್ತ್ವವೇ ಉಪಾಸನೆಯ ಮೂಲಕ ಸಹಾಯಕವಾಗುತ್ತದೆ. ಎಂದು ತಂತ್ರ ಪಂಡಿತರ ಅಭಿಪ್ರಾಯ. ವೈರಾಗ್ಯಾದಿ ಸಾತ್ವಿಕ ಸಂಪತ್ತುಗಳನ್ನು ಗಳಿಸದೇ ಇರುವ ಸಾಧಕನು ಮದ್ಯ ಮಾಂಸಾದಿ ಪಂಚ ಮಕಾರಗಳನ್ನು ಸೇವಿಸಬಹುದು. ಆದರೆ ಉಪಾಸನಾ ಪದ್ಧತಿಯಲ್ಲಿ ಮಾತ್ರ ಸೇವಿಸಬಹುದು. ಅದನ್ನು ಬಿಟ್ಟು ಉಳಿದ ಸಮಯದಲ್ಲಿ ಸೇವಿಸಬಾರದೆಂದು ಆದೇಶವಿದೆ. ಇದರಿಂದ ಸಂಯಮವು ದೃಢವಾಗುತ್ತದೆ, ಮತ್ತು ಉಪಾಸನೆಯ ಪ್ರಧಾನ ಅಂಗವಾದ ಮಂತ್ರ ಜಪದಿಂದ ಸ್ವರ್ಗಸುಖವನ್ನುಂಟುಮಾಡುವ ' ಅಪೂರ್ವದ'ದ ಸಂಚಯವಾಗುತ್ತದೆ. ಸ್ವಾಭಾವಿಕವಾಗಿ ಹೇಯ ವಸ್ತುಗಳನ್ನು ದೂರೀಕರಿಸಿ ಅವುಗಳನ್ನೇ ಉಪಾದೇಯ ಸಾಧಕಗಳನ್ನಾಗಿ ಸಾಧಕನು ಮಾರ್ಪಡಿಸುತ್ತಾನೆ. ಭಾವನಾದ್ವೈತದ ಮೂಲಕ ದ್ರವ್ಯಾದ್ವೈತಬುದ್ಧಿಯು ಉದಯಿಸುತ್ತದೆ. ಸಾಧಕನು ಹೇಯ ಉಪಾದೇಯಗಳನ್ನು ನಾಶಮಾಡಿ ಚಿತ್ತದ ಸಾಕ್ಷಾತ್ಕಾರವನ್ನು ಮಾಡಿಕೊಳ್ಳುತ್ತಾನೆ. ಇದರಿಂದ ಸಾಮಾನ್ಯವಾಗಿ ಮನುಷ್ಯನು ಅನಿಷ್ಟಕಾರಿಗಳಾದ ಶಕ್ತಿಗಳನ್ನು ಹಿತಕಾರಿಗಳನ್ನಾಗಿ ಮಾಡಿಕೊಳ್ಳುತ್ತಾನೆ. ವಿಘ್ನದೇವತೆಗಳು ಸಾಧನೆಯಿಂದ ಸಿದ್ಧಿದಾತೃಗಳಾಗುತ್ತವೆ. ಏತಕ್ಕೆಂದರೆ ಪಾರಮಾರ್ಥಿಕವಾಗಿ ವಿಘ್ನ ಮತ್ತು ಸಿದ್ಧಿ, ಅವಿದ್ಯಾ ಮತ್ತು ವಿದ್ಯಾ ಇವುಗಳು ಪರದೇವತೆಯ ಅವಿಚ್ಛೇದ್ಯ ರೂಪಗಳು. ಈ ಸೈದ್ಧಾಂತಿಕ ರೂಪಗಳ ಸಹಾಯವನ್ನು ಗಣೇಶನ ವಿಕಾಸ ಕ್ರಮದಲ್ಲಿ ತೆಗೆದುಕೊಂಡಿರಬೇಕು. ಇದೇ ವಿಷಯವನ್ನು ಶ್ರೀ ಭಗವಾನ್ದಾಸರು ಮಾನವಧರ್ಮಸಾರದಲ್ಲಿ ತಮ್ಮ ಅಭಿಪ್ರಾಯವನ್ನು ಈರೀತಿ ವ್ಯಕ್ತಪಡಿಸಿದ್ದಾರೆ:—

ಪ್ರಾಚೀನೇನಾರ್ಯವೈದಿಕಸಮಾಜೇನ ಪರಾಜಿತ ಬರ್ಬರನಿಷಾದಾದಿ ಜಾತೀಃ ಸ್ವಸಮಾಜವ್ಯವಸ್ಥಾಯಾಂ ಯಥಾಸ್ಥಾನಂ ನಿವೇಶಯಿತುಂ, ಮೈತ್ರೀಬುದ್ಧ್ಯಾ ಚ ಸಾನ್ತ್ವಯಿತುಂ ತಾಸಾಂ ಕಾಶ್ಚಿದ್ಬಹುಪೂಜಿತಾ ದೇವತಾಃ ತದರ್ಚನಪ್ರಕಾ

ರಾಣಾನುಂಶಾಂಶ್ಚ ಕಾಂಶ್ಚಿತ್ ಯಥಾಶಕ್ಯಂ ಪರಿಷ್ಕೃತ್ಯಾನು ಮೇನಿರೆ । ಆಧ್ಯಾತ್ಮಿಕೈರರ್ಥೈಶ್ಚಾಪಿ ತಾಸಾಂ ಜಾತೀನಾಂ ಕ್ರಮಶಃ ಉದ್ಬೋಧನಾಯ ಚೋತ್ಕರ್ಷಣಾಯ ಚ ತಾ ದೇವತಾಶ್ಚ ತಾನರ್ಚಪ್ರಕಾರಾಂಶ್ಚ ಯುಯುಜಿರೆ ।

ಪ್ರಾಚೀನ ಆರ್ಯ ವೈದಿಕ ಸಮಾಜವು ತಮ್ಮಿಂದ ಸೋತ ಬರ್ಬರ ಮತ್ತು ನಿಷಾದಾದಿಗಳ ಸಾಮಾಜಿಕ ಸ್ಥಿತಿಗಳನ್ನು ಯಥಾಸ್ಥಾನ ದಲ್ಲಿರಿಸಲು ಮತ್ತು ಸ್ನೇಹ ಬುದ್ಧಿಯಿಂದ ಅವರನ್ನು ಸಮಾಧಾನ ಪಡಿಸಲು ಅವರಲ್ಲಿಯ ಬಹುಪೂಜಿತ ದೇವತೆಗಳನ್ನು ಮತ್ತು ಮುಖ್ಯ ವಾದ ಪೂಜಾಂಶಗಳನ್ನು ತಮ್ಮ ಶಕ್ತ್ಯಾನುಸಾರ ಪರಿಷ್ಕರಿಸಿ ಅವುಗಳನ್ನು ಒಪ್ಪಿಕೊಂಡರು. ಆ ಜಾತಿಗಳ ಉದ್ಬೋಧನೆ ಮತ್ತು ಉತ್ಕರ್ಷಣಕ್ಕಾಗಿ ಆ ದೇವತೆಗಳಿಗೂ ಹಾಗೂ ಪೂಜಾವಿಧಾನಗಳಿಗೂ ಅಧ್ಯಾತ್ಮಿಕ ಅರ್ಥ ವನ್ನು ಕಲ್ಪಿಸಿದರು. ಮೇಲಿನ ಕೆಲವು ಅಂಶಗಳನ್ನು ನಾನು ಒಪ್ಪು ತ್ತೇನೆ. ಆರ್ಯವೈದಿಕ ಸಮಾಜವು ಬುದ್ಧಿಪೂರ್ವಕವಾಗಿಯೇ ತಮ್ಮ ದೇವತೆಗಳ ಸಾಲಿನಲ್ಲಿ ಗಣಪತಿಯನ್ನು ಸೇರಿಸಿದರು. ಆದರೆ ಪ್ರಾರಂಭ ದಲ್ಲಿ ಆರ್ಯರು ಅನಾರ್ಯರ ಸಹವಾಸದಿಂದ ವಿನಾಯಕನ ರೂಪದಲ್ಲಿ ಗಣಪತಿಯನ್ನು ಬಲಾತ್ಕಾರವಾಗಿ ಸೇರಿಸಿದರು. ಅನಂತರ ಅವನನ್ನು ಪರಿಷ್ಕರಿಸಬೇಕಾಗಿ ಬಂದಿತೆಂಬುದು ನನ್ನ ಅಭಿಪ್ರಾಯ.

'ಏಕಂ ಸದ್ವಿಪ್ರಾ ಬಹುಧಾ ವದಂತಿ' ಪರತತ್ತ್ವವು ಒಂದೇ ಒಂದು ವಿದ್ವಾಂಸರು ಆ ವಸ್ತುವನ್ನೇ ಅನೇಕ ಹೆಸರುಗಳಿಂದ ಕರೆಯು ತ್ತಾರೆ. ಆ ತತ್ತ್ವವು ಶುದ್ಧಾವಸ್ಥೆಯಲ್ಲಿ ಅಖಂಡವು, ಚಿದ್ಘನವು ನೇತಿ ನೇತಿ ಎಂದು ಒಬ್ಬನೇ ಒಬ್ಬ ಮತ್ತೊಬ್ಬನಿಲ್ಲ ಎಂಬ ಏಕಬ್ರಹ್ಮವಾಗಿರು ತ್ತದೆ. ಮಾಯೆಯನ್ನು ವಶೀಕರಿಸಿಕೊಂಡಿರುವ ಆ ತತ್ತ್ವವನ್ನೇ ಪರಮಾತ್ಮ ಅಥವಾ ಈಶ್ವರನೆಂದು ಕರೆಯುತ್ತಾರೆ. ಇದನ್ನೇ ಕೆಲವು ಸಾಧಕರು ಬ್ರಹ್ಮ, ವಿಷ್ಣು ಮತ್ತು ಶಿವನೆಂದು ಕರೆಯುತ್ತಾರೆ. ಗಾಣಾ

ಪತ್ಯರು ಈ ಪರಮಾತ್ಮನನ್ನು ಗಣಪತಿ ಎಂದು ಕರೆಯುತ್ತಾರೆ. ಗಣಪತಿ ತತ್ತ್ವವು ಬ್ರಹ್ಮನಿಂದ ಅಭಿನ್ನವೆಂದು ಅವರ ಭಾವನೆ. ಗಣೇಶಪುರಾಣದ ಉಪಾಸನಾಖಂಡದಲ್ಲಿರುವ ಒಂದು ಗಣೇಶಾಷ್ಟಕವನ್ನು ನೋಡ ಬಹುದು :—

ಯತಶ್ಚಾವಿರಾಸೀಜಗತ್ಸರ್ವಮೇತತ್ತಥಾಬ್ಜಾಸನೋ
ವಿಶ್ವಗೋ ವಿಶ್ವಗೋಪ್ತಾ ।
ತಥೇಂದ್ರಾದಯೋ ದೇವಸಂಘಾ ಮನುಷ್ಯಾಃ ಸದಾ
ತಂ ಗಣೇಶಂ ನಮಾಮೋ ಭಜಾಮಃ ॥

ಸಮಸ್ತ ಜಗತ್ತು ಬ್ರಹ್ಮ, ವಿಷ್ಣು, ಶಿವ ಮತ್ತು ಇಂದ್ರಾದಿ ದೇವತೆಗಳ ಸಮೂಹ ಹಾಗು ಮನುಷ್ಯರ ಉತ್ಪತ್ತಿಗೆ ಕಾರಣನಾದ ಗಣಪತಿಯನ್ನು ಭಜಿಸುತ್ತೇವೆ, ನಮಸ್ಕರಿಸುತ್ತೇವೆ. ಇದರಿಂದ ಏಕದಂತಸ್ತೋತ್ರದಲ್ಲಿ:—

ಸದಾತ್ಮರೂಪಂ ಸಕಲಾದಿಭೂತಮಮಾಯಿನಂ
ಸೋಽಹಮಚಿನ್ತ್ಯಬೋಧಮ್ ।
ಅನಾದಿಮಧ್ಯಾಂತ ವಿಹೀನಮೇಕಂ
ತಮೇಕದಂತಂ ಶರಣಂ ವ್ರಜಾಮಃ ॥

ವಿಶ್ವಾದಿಭೂತಂ ಹೃದಿ ಯೋಗಿನಾಂ ವೈ
ಪ್ರತ್ಯಕ್ಷರೂಪೇಣ ವಿಭಾಂತಮೇಕಮ್ ।
ಸದಾ ನಿರಾಲಂಬಸಮಾಧಿಗಮ್ಯಂ
ತಮೇಕದಂತಂ ಶರಣಂ ವ್ರಜಾಮಃ ॥

ಯಾವಾಗಲೂ ಆತ್ಮರೂಪನಾದ, ಆದಿತತ್ತ್ವನಾದ, ಮಾಯಾ ರಹಿತನಾದ ಸೋಽಹಂ ಬೋಧಸ್ವರೂಪನಾದ, ಚಿತ್ತಕ್ಕೆ ಅತೀತನಾದ ಆದ್ಯಂತರಹಿತನಾದ, ಅದ್ವಿತೀಯನಾದ ಏಕದಂತನಿಗೆ ಶರಣುಹೋಗು ತ್ತೇವೆ, ಮತ್ತು ವಿಶ್ವಕ್ಕೆ ಮೂಲಕಾರಣನಾದ, ಅದ್ವಿತೀಯನಾದ

ಯೋಗಿಗಳ ಹೃದಯದಲ್ಲಿ ಪ್ರತ್ಯಕ್ಷಪ್ರಕಾಶವನ್ನುಂಟುಮಾಡುವ, ನಿರಾಲಂಬಸಮಾಧಿಗಮ್ಯನಾದ ಏಕದಂತನನ್ನು ಆಶ್ರಯಿಸುತ್ತೇವೆ.

ಗಣೇಶನ ಕೈಯಲ್ಲಿರುವ ಆಯುಧಗಳ ವಿಷಯದಲ್ಲಿ ಸ್ವಲ್ಪ ಚರ್ಚಿಸುವ. ಬಹುತೇಕವಾಗಿ ಅವನಲ್ಲಿ ಪಾಶ ಮತ್ತು ಅಂಕುಶಗಳಿರುತ್ತವೆ. ಪಾಶವು ಮೋಹರೂಪದ್ದು ತಮೋಗುಣದ ಪ್ರತೀಕ. ಅಂಕುಶ ಪ್ರವೃತ್ತಿರೂಪದ್ದು ರಜೋಗುಣದ ಪ್ರತೀಕ. ಬೇರೆ ದೇವತೆಗಳ ವಿಗ್ರಹಗಳಲ್ಲಿಯೂ ಈ ಆಯುಧಗಳಿಗೆ ಮೇಲಿನ ಅರ್ಥವನ್ನು ಕಲ್ಪಿಸುತ್ತಾರೆ. ಮೋದಕವು, ಮೋದ ಅಂದರೆ ಆನಂದವನ್ನುಂಟುಮಾಡುವುದಾಗಿದೆ. ಒಂದುಪಕ್ಷ ಇವುಗಳ ವಿವರಣೆಯು ಸರಿಯಾಗಿದ್ದರೆ ಇವೆಲ್ಲವೂ ಇತ್ತೀಚೆಗೆ ಅಲಂಕರಿಸಲ್ಪಟ್ಟಿರಬೇಕು. ಮದ್ಯದ ಪಾತ್ರೆಯು ಮೋಹ, ಅಜ್ಞಾನ ತಮೋಗುಣ ಮತ್ತು ವಿಘ್ನದ ಪ್ರತೀಕವಾಗಿದೆ. ಆದರೆ ಅನಾರ್ಯ ಭಕ್ತರು ಮದ್ಯವನ್ನೇ ಅರ್ಘ್ಯವನ್ನಾಗಿ ಅರ್ಪಿಸಿ ಅವನನ್ನು ಸಂತೋಷಗೊಳಿಸುತ್ತಿದ್ದರೆಂದು ಊಹಿಸಬಹುದು.

ವಿದ್ವಾಂಸರು ಗಣೇಶ ಪದಕ್ಕೆ ಬಹಳ ಚಾತುರ್ಯದಿಂದ ಅರ್ಥವನ್ನು ಕಲ್ಪಿಸಿದ್ದಾರೆ:—

**ಜ್ಞಾನಾರ್ಥವಾಚಕೋ ಗಶ್ಚ ಣಶ್ಚ ನಿರ್ವಾಣ ವಾಚಕಃ ।**
**ತಯೋರೀಶಂ ಪರಂ ಬ್ರಹ್ಮ ಗಣೇಶಂ ಪ್ರಣಮಾಮ್ಯಹಮ್ ॥**

ಗಕಾರವು ಜ್ಞಾನವಾಚಕ, ಣಕಾರವು ನಿರ್ವಾಣ ವಾಚಕ, ಈ ಜ್ಞಾನ ನಿರ್ವಾಣಗಳಿಗೆ ಈಶ ಸ್ವಾಮಿ ಪರಬ್ರಹ್ಮನಾದ ಗಣೇಶನಿಗೆ ನಮಸ್ಕರಿಸುತ್ತೇನೆ

ರುದ್ರನಿಂದ ಸಾರೂಪ್ಯವನ್ನು ಹೊಂದಿದ ಗಣೇಶನನ್ನು ಲಿಂಗರೂಪದಿಂದ ಪೂಜಿಸುವುದು ಸ್ವಾಭಾವಿಕವಾಗಿತ್ತು. ಗಣಪತಿಲಿಂಗವು ಬೀಜಪೂರ ಅಂದರೆ ದಾಳಿಂಬೆ ಅಥವಾ ನಿಂಬೆ ಹಣ್ಣಿನಂತಿರುತ್ತದೆ.

ಎರಡು ಹಣ್ಣುಗಳಲ್ಲಿಯೂ ಬೀಜಗಳು ಹೆಚ್ಚು, ಆದರೆ ದಾಳಿಂಬೆಯಲ್ಲಿ ಅಧಿಕ ಬೀಜಗಳಿರುತ್ತವೆ. ಬೀಜಗಳ ಸಂಖ್ಯೆ ವಿಘ್ನ ಹಾಗು ಸಿದ್ಧಿಗಳ ಪ್ರತೀಕವಾಗಿದೆ. ಕೆಲವರು ಸೃಷ್ಟಿಶಕ್ತಿಯ ಪೃಷ್ಟ ಭೂಮಿಯೆಂದು ಕರೆಯುತ್ತಾರೆ. ಗಣೇಶನ ಶರೀರವು ಎಲ್ಲಾ ವಿಚಾರಕರ ಮನಸ್ಸನ್ನಾಕರ್ಷಿಸುತ್ತದೆ. ಅವನ ಅಪ್ರಾಕೃತಿಕ ಅಂಗಗಳಿಗೆ ಒಂದು ಗಂಭೀರ ಅರ್ಥವಿರಬೇಕು. ಶ್ರೀ ಭಗವಾನ್ದಾಸರು ಧರ್ಮಸಮನ್ವಯ ಮಾಡುವಾಗ ಶ್ರೀಚಂಪತರಾಯ್ ಜೈನರನ್ನೇ ಅನುಸರಿಸಿದ್ದಾರೆ. ರಾಯ್ ಅವರ ಅಭಿಪ್ರಾಯದಂತೆ, ಇಲಿಯು ವಿವೇಚಕ, ವಿಭಾಜಕ, ಭೇದಕಾರಕ ವಿಸ್ತಾರಕ ಮತ್ತು ವಿಶ್ಲೇಷಕ ಬುದ್ಧಿಯದಾಗಿದೆ. ಗಣೇಶನ ಮೊದಲನೆ ಸಿರಸ್ಸು ಹೋದುದು ಅಹಂಕಾರ ನಾಶದ ಕುರುಹು. ಅನಂತರ ಆನೆಯ ಸಿರಸ್ಸನ್ನು ಸೇರಿಸಿದುದು ಸಂಯೋಜನೆ ಸಮಾಹಾರಕ, ಸಮನ್ವಯಕಾರಕ, ಸಂಶ್ಲೇಷಬುದ್ಧಿಯ ಉದಯದ ಸೂಚಕವಾಗಿದೆ. ಜ್ಞಾನ ಮತ್ತು ತನ್ಮೂಲಕ ವ್ಯವಹಾರಕ್ಕೆ ಸಾಮಾನ್ಯ ಹಾಗು ವಿಶೇಷವೆರಡರ ಪರಿಚಯ ಆವಶ್ಯಕ. ಆದರೆ ಮುಖ್ಯವಾಗಿ ಸಮನ್ವಯ ಬುದ್ಧಿ ಬೇಕೇಬೇಕು. ಆದುದರಿಂದ ಗಣಪತಿಯು ಇಲಿಯನ್ನು ವಾಹನವನ್ನಾಗಿ ಮಾಡಿಕೊಂಡಿದ್ದಾನೆ. ಈ ಸಂಶ್ಲೇಷಕ ಬುದ್ಧಿಯಿಂದಲೇ ಗಣಪತಿಯು ಬುದ್ಧಿಸಾಗರನಾಗಿದ್ದಾನೆ. ಅವನ ಏಕದಂತವು ಅದ್ವೈತದ ಸೂಚಕವಾಗಿದೆ. ಲಂಬೋದರತ್ವವು ಅನೇಕ ಬ್ರಹ್ಮಾಂಡಗಳು ಅದರಲ್ಲಿ ಅಡಗಿರುವುದರಿಂದ ಆ ಹೆಸರು ಬಂದಿದೆ. ಆನಂದವನ್ನುಂಟುಮಾಡುವುದರಿಂದ ಮೋದಕಪ್ರಿಯನಾಗಿದ್ದಾನೆ. ಬ್ರಹ್ಮಾನಂದದ ಹೆಸರೇ ಮೋದಕವಾಗಿದೆ. ಮೇಲಿನ ವಿವರಣೆಗಳು ವಿದ್ವಾಂಸರ ಕಲ್ಪನೆಗಳಾಗಿದ್ದರೆ ಒಪ್ಪುವುದಕ್ಕಾಗುವುದಿಲ್ಲ. ಗಣೇಶನ ಧ್ಯಾನಗಳಲ್ಲಿರುವಂತೆ ಅವನನ್ನು ಆಯುಧಗಳಿಂದ ಅಲಂಕರಿಸಿದ್ದಾರೆ. ಇವೆಲ್ಲವೂ ಆಧ್ಯಾತ್ಮಿಕ ಸ್ವರೂಪದ ಪ್ರತೀಕಗಳಾಗಿವೆ. ಆದರೆ ಸೊಂಡಿಲು, ಮುರಿದ ದಂತ ದೊಡ್ಡದಾದ ಹೊಟ್ಟೆ ಇವುಗಳು ವಿದ್ವಾಂಸರ ಕೊಡುಗೆಗಳಲ್ಲ. ಇವುಗಳು

ಬರ್ಬರ ಮತ್ತು ವ್ರಾತ್ಯ ಉಪಾಸಕರ ಕೊಡುಗೆಗಳಾಗಿವೆ. ವಿನಾಯಕನ ಕಾಲದಲ್ಲಿ ಗಣೇಶನಿಗೆ ಈ ರೂಪವೇ ಇದ್ದಿತು. ವಿದ್ವಾಂಸರು ಕೆಲವನ್ನು ಬಿಟ್ಟು ಕೆಲವನ್ನು ಸೇರಿಸಿದರು. ಆದರೂ ಹಿಂದಿನ ರೂಪವನ್ನು ಬದಲಾಯಿಸಲಾಗಲಿಲ್ಲ. ವಿಘ್ನವನ್ನುಂಟುಮಾಡುವ ಸ್ವಭಾವ ಮತ್ತು ವಿಲಕ್ಷಣ ಶರೀರದ ಕೆಲವು ಸ್ಮರಣೆಗಳು ಉಳಿದಿವೆ.

ಹಿಂದೆ ಒಂದು ಕಡೆ ಯಜುರ್ವೇದದ ಒಂದು ಮಂತ್ರದಲ್ಲಿ ರುದ್ರ ಮತ್ತು ಅವನ ಸಹೋದರಿ ಅಂಬಿಕೆಯ ವಿಚಾರವನ್ನು ವಿವರಿಸಿದ್ದೇನೆ. ಅಲ್ಲಿಯೇ ಆಖು (ಇಲಿ) ವನ್ನು ರುದ್ರನ ಪಶುವೆಂದು ತಿಳಿಸಿದೆ. ಅಂಬಿಕೆಯು ರುದ್ರನ ಶಕ್ತಿಯಾಗಿದ್ದಾಳೆ. ಆದುದರಿಂದ ರುದ್ರನ ಪತ್ನಿಯಾದಳು. ಪುರಾಣಗಳಲ್ಲಿ ಇದೇ ಅಭಿಪ್ರಾಯ ಬಂದಿದೆ. ಆದರೆ ಶಕ್ತಿ ಮತ್ತು ಶಕ್ತಿಮಾನ್, ಪರಮಾತ್ಮಾ ಮತ್ತು ಆಥ್ಯಾ, ಶಿವ ಮತ್ತು ಶಕ್ತಿ ಇವರುಗಳಿಗೆ ಭೇದವಿಲ್ಲ. ಇವರ ಸಂಬಂಧ ಅವಿನಾಭಾವ ಸಂಬಂಧ. ಶಿವನಿಲ್ಲದೆ ಶಕ್ತಿ ಇಲ್ಲ, ಶಕ್ತಿ ಇಲ್ಲದೆ ಶಿವನಿಲ್ಲ, ಆದುದರಿಂದ ಶ್ರುತಿಯು ಇವರಿಗೆ ಸಹೋದರ ಸಹೋದರೀ ಎಂದು ಹೇಳಿದೆ. ಜೀವನನ್ನು ಪಶು ಎಂದು ಕರೆಯುತ್ತಾರೆ. ವಿದ್ಯೆ (ಜ್ಞಾನ) ಗೆ ಸ್ವಾಮಿಯಾದ ಶಂಕರನು ಪಶುಪತಿಯಾದ. ಲೌಕಿಕವಾಗಿ ಇಲಿಯನ್ನು ಜೀವನ ಪ್ರತೀಕವೆಂದು ತಿಳಿದು ಪಶು ಎಂದು ಕರೆದಿರಬಹುದು. ಚಪಲತೆ ಮತ್ತು ಭೋಗಕ್ಕೆ ಇಲಿಯು ಪ್ರಸಿದ್ಧವಾದುದು. ಅದರ ಸಂಚಾರ ರಾತ್ರಿಯಲ್ಲಿ. ಮೋಹ ಮತ್ತು ಅಜ್ಞಾನಗಳನ್ನು ರಾತ್ರಿಗೆ ಹೋಲಿಸುತ್ತಾರೆ. ಇದರಿಂದ ಇಲಿಗೂ ಜೀವನಿಗೂ ಸಾಮ್ಯವುಂಟು. ಅನಾರ್ಯ ವಿನಾಯಕನಿಗೆ ಇಲಿಯು ವಾಹನವಾಗಿತ್ತೆಂದು ಹೇಳುವುದು ಕಷ್ಟ. ನನ್ನ ಅಭಿಪ್ರಾಯದಲ್ಲಿ ವಿನಾಯಕನಿಗೆ ರುದ್ರ ಪದವಿ ಪ್ರಾಪ್ತವಾದಮೇಲೆ ಇಲಿಯು ವಾಹನವಾಗಿ ಬಂದಿರಬೇಕು. ಉಭಯದೃಷ್ಟಿಯಲ್ಲಿ ಇಲಿಯು ಮೋಹಾವೃತ ಜೀವನ ಪ್ರತೀಕ ಮತ್ತು ಗಣೇಶನು ವಿದ್ಯಾತ್ಮಕ ಈಶ್ವರನ ಪ್ರತೀಕವೆಂದು

ಹೇಳಬಹುದು. ಸಾಧಕನಿಗೆ ತನ್ನ ಉಪಾಸ್ಯ ವಸ್ತುವನ್ನು ಉನ್ನತ ಆಧ್ಯಾತ್ಮಿಕ ಸಿಂಹಾಸನದಲ್ಲಿ ಕುಳ್ಳಿರಿಸಿ ಸರ್ವಗುಣಗಳ ನಿಧಿಯೆಂದು ತಿಳಿದು ಆರಾಧಿಸುವ ಅಧಿಕಾರವಿದೆ. ಆಗಲೇ ಶ್ರದ್ಧೆಯಿಂದ ಮಾಡಿದ ಉಪಾಸನೆಯೂ ಸಿದ್ಧಿಸುವುದು. ವಿದ್ವಾಂಸರಿಗೂ ಈರೀತಿಯಾದ ಬುದ್ಧಿಯ ವೈಭವವನ್ನು ಪ್ರದರ್ಶಿಸುವ ಸಮಯ ಸಿಕ್ಕುತ್ತದೆ. ಸ್ಥೂಲವಾದುದು ಸೂಕ್ಷ್ಮರೂಪವನ್ನು ಹೊಂದುತ್ತದೆ. ಆದರೆ ಈ ವಿಚಾರಗಳಿಂದ ಐತಿಹಾಸಿಕ ವಿಷಯಗಳನ್ನು ಮುಚ್ಚಿಡಬಾರದು.



# ಅಧ್ಯಾಯ ೯

## ಬೌದ್ಧ ಮತ್ತು ಜೈನಧರ್ಮಗಳಲ್ಲಿ ವಿನಾಯಕ

ಏಳನೇ ಅಧ್ಯಾಯದ ತಂತ್ರ ಮತ್ತು ಮಹಾಯಾನ ಬೌದ್ಧ ಸಂಪ್ರದಾಯಗಳ ವಿಷಯವಾಗಿ ಚರ್ಚಿಸಿದ್ದೇವೆ. ಬೌದ್ಧರು ತಾಂತ್ರಿಕ ಉಪಾಸನೆಗಳಿಗೆ ಜನ್ಮದಾತರಲ್ಲ. ಬೀಜರೂಪದಲ್ಲಿದ್ದ ತಾಂತ್ರಿಕ ಉಪಾಸನೆಗಳನ್ನು ಅವರು ವಿಸ್ತಾರ ಮಾಡಿದರು. ಅನಂತರ ತಂತ್ರಾಚಾರ್ಯರು ತಮ್ಮ ಮೂಸೆಯಲ್ಲಿ ಹಾಕಿ ಪುಟವಿಟ್ಟರು.

ನಮಗೆ ತಿಳಿದಮಟ್ಟಿಗೆ ಬುದ್ಧದೇವನು ಗಣೇಶನನ್ನು ಎಲ್ಲಿಯೂ ಉಲ್ಲೇಖಿಸಿಲ್ಲ. ವಿಕ್ರಮ ಶಕೆ ೬೦೦ ವರ್ಷಗಳವರೆವಿಗೆ ದೇವತೆಗಳ ಸಮೂಹದಲ್ಲಿ ಗಣೇಶನು ಸೇರಿರಲಿಲ್ಲ. ಬುದ್ಧದೇವನ ನಿರ್ವಾಣದ ಕೆಲವು ಕಾಲದ ಅನಂತರ ಮಹಾಯಾನ ಸಂಪ್ರದಾಯವು ಉದಯಿಸಿತು. ಈ ಸಂಪ್ರದಾಯವು ಉತ್ತರ ಭಾರತದಿಂದ ಟಿಬೆಟ್, ಚೀನ ಹಾಗು ಜಪಾನಿನವರೆವಿಗೆ ಹರಡಿತು. ಇದರಲ್ಲಿ ಪವಿತ್ರ 'ಪಿಟಕ' ಗ್ರಂಥಗಳಲ್ಲಿ ಹೇಳದಿರುವ ಅನೇಕ ಯಂತ್ರ ಮಂತ್ರ ದೇವದೇವಿಯರನ್ನು ಹೇಳಲಾಗಿದೆ. ಬರ್ಮಾ ಮತ್ತು ಸಿಲೋನಿನಲ್ಲಿರುವ ಹೀನಯಾನ ಸಂಪ್ರದಾಯವು ಈ ತಾಂತ್ರಿಕ ಪದ್ಧತಿಯನ್ನು ಒಪ್ಪುವುದಿಲ್ಲ.

ಪುರಾಣಕಾರನಾದ ವೇದವ್ಯಾಸನು ಮತ್ತು ತಂತ್ರಾಚಾರ್ಯರು ತಮ್ಮ ಗ್ರಂಥಗಳನ್ನು ಸಾಕ್ಷಾತ್ ಈಶ್ವರನೇ ಉಪದೇಶಿಸಿದನೆಂದು ಉಲ್ಲೇಖಿಸಿದ್ದಾರೆ. ಹಾಗೆಯೇ ಬುದ್ಧ ಮಹಾಮುನಿಯು ತಮ್ಮ ಶಿಷ್ಯರಿಗೆ ಉಪದೇಶಿಸಿದನೆಂದು ಮಹಾಯಾನ ಗ್ರಂಥಗಳಲ್ಲಿ ಹೇಳಿದೆ. ಅದು ಬಹಳ ರಹಸ್ಯವಾದುದರಿಂದ ಕೇವಲ ಕೆಲವು ಶಿಷ್ಯರಿಗೆ ಮಾತ್ರ ಹೇಳಲಾಯಿತೆಂದು ಅವರ ನಂಬಿಕೆ. ಪುರಾಣಗಳಲ್ಲಿ ಕಾಣುವ ವಿಘ್ನಕಾ೦.

ಮತ್ತು ಮಂಗಳಕಾರಿ ಈ ಎರಡು ಗಣೇಶನ ರೂಪಗಳನ್ನು ಬೌದ್ಧ ತಂತ್ರ ಗಳಲ್ಲಿಯೂ ಕಾಣಬಹುದು.

"ಮಂಜುಶ್ರೀ" ಮೂಲಕಲ್ಪವು ಮಹಾಯಾನ ಸಂಪ್ರದಾಯದ ಪ್ರಾಚೀನ ಹಾಗು ಪ್ರಾಮಾಣಿಕ ಗ್ರಂಥ. ಅದರ ಭಾಷೆ ಸಂಸ್ಕೃತ. ಆದರೆ ವ್ಯಾಕರಣನಿಯಮಗಳನ್ನು ಪ್ರತಿಯೊಂದು ಶ್ಲೋಕದಲ್ಲಿಯೂ ಉಲ್ಲಂಘಿಸಿದೆ. ಮಹಾಯಾನ ಸಂಪ್ರದಾಯದ ಧರ್ಮನಿಷ್ಠರು ಅದನ್ನು ಬೌದ್ಧಮತದ ಮಂತ್ರಭಾಗವೆಂದು ನಂಬುತ್ತಾರೆ. ಅದರಲ್ಲಿ ಭಗವಾನ್ ಶಾಕ್ಯಮುನಿಯು ಕುಮಾರ ಮಂಜಶ್ರೀ ಬೋಧಿಸತ್ವನಿಗೆ ಮಂತ್ರಶಾಸ್ತ್ರ ವನ್ನು ಉಪದೇಶಿಸಿದ್ದಾನೆ. ಮಧ್ಯೆ ಮಧ್ಯೆ ಮಂಜಶ್ರೀ ಮತ್ತು ಪರಿ ಷನ್ಮಂಡಲ (ಸಭಿಕರು) ಹಾಗು ಬುದ್ಧ ಮತ್ತು ಸಭಿಕರ ಪಸ್ಪರ ಚರ್ಚೆ ಗಳು ಬಂದಿವೆ. ಆ ಪುಸ್ತಕದಲ್ಲಿ ವಿನಾಯಕನು ದುಷ್ಟಸ್ವಭಾವದವನೆಂದು ಪರಿಗಣಿಸಲ್ಪಟ್ಟಿದ್ದಾನೆ.

ಒಂದುಸಾರಿ ಭಗವಾನ್ ಶಾಕ್ಯಮುನಿಯು ಮಂಜುಶ್ರೀ ಬೋಧಿ ಸತ್ವನಿಗೆ ಮಂತ್ರರಾಜದ ಭ್ರೂಮ್ ಎಂಬುದರ ಅನುಷ್ಠಾನಮಾಡೆಂದು ಹೇಳಿದನು. ಅಲ್ಲಿಯ ಸಭೆಯಲ್ಲಿ ವಜ್ರಪಾಣಿ ಬೋಧಿಸತ್ವನು ಸಹ ಇದ್ದನು. ಅವನು ಶಾಕ್ಯಮುನಿಯನ್ನು ಸ್ವಾಮಿ! ಇಷ್ಟಾನಿಷ್ಟಸ್ವಪ್ನಗಳ ಲಕ್ಷಣವೇನು? ಅನಿಷ್ಟಸ್ವಪ್ನಗಳಿಂದುಂಟಾಗುವ ಅಸಿದ್ಧಿಗಳನ್ನು ಹೋಗ ಲಾಡಿಸಲು ಉಪಾಯವೇನು? ಎಂಬುದನ್ನು ಸಾಧಕನಿಗೆ ತಿಳಿಸಿಕೊಡ ಬೇಕೆಂದು ಪ್ರಾರ್ಥಿಸಿದನು. ಅನಂತರ ಶಾಕ್ಯಮುನಿಯು ವಿಸ್ತಾರವಾಗಿ ಮಂಜುಶ್ರೀ ಗ್ರಂಥದ ಹದಿನೈದನೇ ಪಟಲದಲ್ಲಿ ಬೋಧಿಸಿರುವ ಕೆಲವು ಅಂಶಗಳನ್ನು ಇಲ್ಲಿ ಕೊಡಲಾಗಿದೆ:—

**ವಿಘ್ನಘಾತನ ಮಂತ್ರಂ ತು ತಸ್ಮಿನ್ ಕಾಲೆ ಪ್ರಕಲ್ಪ್ಯತೆ ।**
**ಯುಕ್ತಿರೂಪಾ ತದಾ ಮಂತ್ರಾ ಜಾಪಿನಾಂ ತಂ**
**ಪ್ರಯೋಜಯೇತ್ ॥**

ಷಡ್ಭುಜೋಽಥ ಮಹಾಕ್ರೋಧಃ ಷಣ್ಮುಖಶ್ಚೈವ ಪ್ರಕಲ್ಪಿತೆ ।
ಚತುರಕ್ಷರೋ ಮಹಾಮಂತ್ರಃ ಕುಮಾರಮೂರ್ತಿನಿಸ್ಸೃತಃ ॥

ಘೋರರೂಪಾ ಮಹಾಘೋರೋ ವರಾಹಾಕಾರ ಸಂಭವಃ ।
ಸರ್ವವಿಘ್ನ ವಿನಾಶಾರ್ಥಂ ಕಾಲರಾತ್ರಂ ತದೇವರಾಟ್ ॥

ವ್ಯಾಘ್ರಚರ್ಮ ನಿವಸ್ತ್ರಸ್ತು ಸರ್ಪಾಭೋಗ ವಿಲಂಬಿತಃ ।
ಅಸಿಹಸ್ತೋ ಮಹಾಸತ್ವಃ ಕೃತಾಂತರೂಪೀ ಮಹೌಜಸಃ ॥

ನಿರ್ಘೃಣಃ ಸರ್ವವಿಘ್ನೇಷು ವಿನಾಯಕಾನಾಂ
ಪ್ರಾಣಹಂತಕೃತ್ ।
ಶೃಣ್ವಂತು ಸರ್ವಭೂತಾ ವೈ ಮಂತ್ರೆ ತಂತ್ರೆ ಸುದಾರುಣಮ್ ॥
ನಾಶಕೋ ದುಷ್ಟಸತ್ವಾನಾಂ ಸರ್ವವಿಘ್ನೋಪಹಾರಿಕಃ ।
ಸಾಧಕಃ ಸರ್ವಮಂತ್ರಾಣಾಂ ದೇವಸಂಘಾ ಶೃಣೋಥ ಮೆ ॥

ಇದರ ಭಾವಾರ್ಥ :—ಸಾಧಕನಿಗೆ ಕೆಟ್ಟಸ್ವಪ್ನಗಳು ಬಿದ್ದರೆ ಅವನು ಮಹಾಕ್ರೋಧನನ್ನು ಧ್ಯಾನಿಸಬೇಕು ಮಹಾಕ್ರೋಧನಿಗೆ ಆರು ಮುಖ, ಆರು ಹಸ್ತ, ಆರು ಪಾದಗಳಿವೆ. ಅವನು ಹುಲಿಯ ಚರ್ಮವನ್ನು ಧರಿಸಿದ್ದಾನೆ. ಹಂದಿಯಂತೆ ರೂಪುಳ್ಳವನು ಸರ್ಪಗಳನ್ನು ಧರಿಸಿ ಘೋರರೂಪಿಯಾಗಿದ್ದಾನೆ. ನಿರ್ದಯಿ ಅವನ ಕೈಯಲ್ಲಿ ಖಡ್ಗವಿದೆ. ವಿನಾಯಕರ ಪ್ರಾಣಘಾತಕ ಮತ್ತು ಸರ್ವಮಂತ್ರಗಳ ಸಾಧಕ. ಅವನ ಮಂತ್ರ :—

ಹೇ ಹೇ ಮಹಾಕ್ರೋಧ! ಷಣ್ಮುಖ, ಷಟ್‌ಚರಣ ಸರ್ವವಿಘ್ನಘಾತಕ, ಹೂಂ ಹೂಂ ಕಿಂ ಚಿರಾಯಸಿ, ವಿನಾಯಕ ಜೀವಿತಾಂತಕರ, ದುಃಸ್ವಪ್ನಂ ಮೆ ನಾಶಯ, ಲಂಘ ಲಂಘ ಸಮಯಮನುಸ್ಮರ ಫಟ್ ಫಟ್ ಸ್ವಾಹಾ ।

ಎಲೈ ಮಹಾಕ್ರೋಧ! ಏತಕ್ಕೋಸ್ಕರ ವಿಳಂಬಿಸುತ್ತೀಯೆ ? ವಿನಾಯಕನ ಪ್ರಾಣಹಂತಕನೆ ನನ್ನ ದುಃಸ್ವಪ್ನಗಳನ್ನು ನಾಶಮಾಡಿ ನನ್ನನ್ನು ಉದ್ಧರಿಸು. ಈ ಪ್ರಾರ್ಥನೆಯನ್ನು ಕೇಳಿ ಎಲ್ಲಾ ವಿನಾಯಕರು

ಭೀತರಾಗುತ್ತಾರೆ. ಇಲ್ಲಿ ಕೆಲವು ಅಂಶಗಳನ್ನು ಗಮನಿಸಬಹುದು. ವಿನಾಯಕನ ವೈರಿ ಕ್ರೋಧರಾಜನನ್ನು ಷಣ್ಮುಖನೆಂದು ಹೇಳಿದೆ. ಗಣೇಶನ ಸಹೋದರನೂ ಸಹ ಷಣ್ಮುಖನಾಗಿದ್ದಾನೆ. ಗಣೇಶನ ಶರೀರವು ಸರ್ಪಗಳಿಂದ ಭೂಷಿತವಾಗಿರುವಂತೆ ಕ್ರೋಧರಾಜನ ಶರೀರದಲ್ಲಿಯೂ ಸರ್ಪಗಳು ಭೂಷಿತಗಳಾಗಿವೆ. ಅವನು ವಿನಾಯಕನ ಶತ್ರು. ಅವನ ರೂಪು ಘೋರವಾದುದು. ಯಾಜ್ಞವಲ್ಕ್ಯಸ್ಮೃತಿಯಲ್ಲಿ ಹೇಳಿರುವಂತೆ ವಿನಾಯಕನು ದುಃಸ್ವಪ್ನಗಳನ್ನು ಉಂಟುಮಾಡುವವನಾಗಿದ್ದಾನೆ.

ಮಂಜಶ್ರೀ ಗಂಥದ ಮೂವತ್ತನೆ ಪಟಲದಲ್ಲಿ ಮಂತ್ರಗಳನ್ನು ಸಿದ್ಧಿಸಿ ಕೊಳ್ಳುವ ಸ್ಥಾನಗಳ ನಾಮ ನಿರ್ದೇಶಗಳಿವೆ. ಆ ಹೆಸರುಗಳಲ್ಲಿ ಚೀನ, ಮಹಾ ಚೀನ ಮತ್ತು ಬಲಖಗಳ ಹೆಸರುಗಳು ಹೇಳಲ್ಪಟ್ಟಿವೆ. ವಿಂಧ್ಯ ಪರ್ವತವು ಕಾರ್ತಿಕೇಯ ಮಂತ್ರ ಮತ್ತು ವೈನಾಯಕೀಯದ ಸಿದ್ಧಿಗಳಿಗೆ ವಿಶೇಷ ಸ್ಥಾನವೆಂದು ಹೇಳಿದೆ. ವಿನಾಯಕನ ಶಕ್ತಿಯಾದ ವೈನಾಯಕಿಯು ಈಶಾನನ ಕುಮಾರಿ ಎಂದು ಹೇಳಿದೆ. ಅವಳೂ ಸಹ ಮಂತ್ರವನ್ನು ಜಪಿಸುವವರಿಗೆ ವಿಘ್ನವನ್ನುಂಟುಮಾಡುವವಳಾಗಿದ್ದಾಳೆ. ಅವಳ ರೂಪಗಳು ಅನೇಕ. ಹಸ್ತಾಕಾರ ಸಮಾಯುಕ್ತಾ, ಅನೇಕದಂತಾ ಅಂದರೆ ಕೈಯಿನಂತೆ ಆಕಾರವುಳ್ಳವಳು. ಅವಳಿಗೆ ಸೊಂಡಿಲೂ ಸಹ ಕೈಯಿನಂತೆ ಇದೆ. ಆದುದರಿಂದ ಇವಳಿಗೆ ಹಸ್ತಿ ಎಂದು ಹೆಸರು ಬಂದಿದೆ. ವೈನಾಯಕಿಯು ಆನೆಯ ರೂಪವುಳ್ಳವಳು. ಇದು ಗಣೇಶನು ಗಜವದನನಾಗಿರುವುದಕ್ಕೆ ಸಾಕ್ಷಿಯಾಗಿದೆ. ಈ ಉಪದೇಶದಲ್ಲಿ ವಿನಾಯಕನ ಸಿದ್ಧಿಯ ಜೊತೆಯಲ್ಲಿ ಕಾರ್ತಿಕೇಯನ ಸಿದ್ಧಿ ಮಂತ್ರವು ಸಹ ಉಕ್ತವಾಗಿದೆ. ಕಾರ್ತಿಕೇಯನು ಗಣೇಶನ ಸಹೋದರ ಷಣ್ಮುಖನಾಗಿದ್ದಾನೆ. ಈಶಾನ ಎಂಬುದು ಶಂಕರನ ಹೆಸರು. ವೈನಾಯಕಿಯು ಈಶಾನನ ಕುಮಾರಿ ಎಂದು ಹೇಳಿರುವುದರಿಂದ ಶಂಕರನ ಪುತ್ರನು ಗಣೇಶನೆಂದಾಯಿತು.

ಸಲವತ್ತೇಳನೆಯ ಪಟಲದ ಮಂತ್ರಾನುಷ್ಠಾನದಲ್ಲಿ ಸಿದ್ಧಿಗಾಗಿ ಕೆಲವು ಉಪದೇವತೆಗಳ ಹಾಗು ಅಪದೇವತೆಗಳ ಶಾಂತಿಯ ಪ್ರಯೋಗ ಗಳನ್ನುಹೇಳಿದೆ. ಅಂತ್ಯದಲ್ಲಿ ಜಯಾ, ಅಜಿತಾ ಅಪರಾಜಿತಾ, ವಾಮಿನೀ ಪಿಶಾಚಿ ಮತ್ತು ಮಹಾರಾಕ್ಷಸಿಯರ ಜೊತೆಯಲ್ಲಿ ಚತುರ್ವಕ್ತ್ರವಿಭೂ ಷಿತ ಮೂರ್ತಿಯಾದ ತ್ರಿನೇತ್ರ, ಲಂಬೋದರ, ಬಹುರೂಪಿ ಮೊದಲಾದ ಹೆಸರುಗಳೂ ಸಹ ಬಂದಿವೆ. ಇಲ್ಲಿ ಹೇಳಿರುವ ವಿಶೇಷಣಗಳು ವಿನಾಯಕ ನಿಗೆ ಸಂಬಂಧಿಸಿದ್ದರೂ ವಿನಾಯಕನ ಹೆಸರನ್ನು ಹೇಳಿಲ್ಲ. ಅವನಿಗೆ ಚತು ರ್ಮುಖ ಧ್ಯಾನಗಳುಂಟು. ಮೇಲಿನ ಅಂಶಗಳನ್ನು ನೋಡಿದರೆ ಮಂಜುಶ್ರೀ ಗ್ರಂಥ ರಚನೆಯಾದಾಗ ವಿನಾಯಕನು ಕೇವಲ ವಿಘ್ನ ಕರ್ತನೆಂದು ಕಾಣುತ್ತದೆ. ವಿನಾಯಕರು ಅನೇಕರಿದ್ದು ಅವರ ರೂಪಗಳು ಒಂದಕ್ಕಿಂತ ಒಂದು ಭಿನ್ನವಾಗಿದ್ದವು. ಈ ರೂಪಗಳಲ್ಲಿ ಸರ್ಪಾಲಂಕೃತ ನಾದ, ಆನೆಯ ರೂಪಿನ, ದೊಡ್ಡಹೊಟ್ಟೆಯ, ಮೂರು ಕಣ್ಣುಗಳುಳ್ಳ ವಿನಾಯಕರಿದ್ದರು. ಎಂಟನೇ ಅಧ್ಯಾಯದಲ್ಲಿ ನಾವು ಅನುಮಾನಿಸಿರು ವಂತೆ ಕಾಲಾನಂತರದಲ್ಲಿ ಎಲ್ಲಾ ರೂಪಗಳನ್ನು ಸೇರಿಸಿ ಒಬ್ಬ ವಿನಾಯ ಕನು ಗಣೇಶನ ರೂಪವಾಗಿರಬಹುದು. ಈ ವಿನಾಯಕರಲ್ಲಿ ಕಾರ್ತಿಕೇ ಯನೂ ಒಬ್ಬನೆಂದು ತಿಳಿಯಲಾಗಿತ್ತು. ಆ ಸಮಯದಲ್ಲಿ ಕಾರ್ತಿಕೇಯನು ವಿನಾಯಕನ ಶತೃವಾಗಿದ್ದನು. ಇವರಿಬ್ಬರ ಮಂತ್ರಸಿದ್ಧಿ ಸ್ಥಾನವು ಒಂದೇ ಆಗಿದ್ದಿತು. ವಿಘ್ನನಾಶಕನನ್ನು ಕ್ರೂರಿ ಮತ್ತು ಉಗ್ರರೂಪ, ಹಾಗು ಕ್ರೋಧರಾಜನೆಂದು ಉಲ್ಲೇಖಿಸಲಾಗಿದೆ. ಸ್ಕಂದ ಮತ್ತು ವಿನಾಯಕರಲ್ಲಿ ವಿಶೇಷ ಭೇದವಿರಲಿಲ್ಲ. ಕಾಲಾನಂತರದಲ್ಲಿ ಈ ಭಾವನೆ ಬದಲಾಯಿತು. ಅನಂತರ ಈ ಕಥೆ ಪ್ರಸಿದ್ಧಿಗೆ ಬಂದಿತು. ಬುದ್ಧನು ತನ್ನ ಪ್ರಿಯಶಿಷ್ಯ ಆನಂದನಿಗೆ ರಾಜಗೃಹದಲ್ಲಿ ಬಹಳ ಗುಟ್ಟಾದ "ಗಣಪತಿ ಹೃದಯ" ಎಂಬ ಸಿದ್ಧಿದಾತ ಮಂತ್ರವನ್ನು ಹೇಳಿದನು. ಈ ಮಂತ್ರದ ರೀತಿಯಾಗಿ ಗಣಪತಿಯ ಶಕ್ತಿಯನ್ನು ಗಣಪತಿ ಹೃದಯಾ ಎಂದು ಕರೆಯುತ್ತಾರೆ.

ಸಾಧನಮಾಲಾ ಎಂಬ ತಂತ್ರಗ್ರಂಥವು ಬೌದ್ಧರಲ್ಲಿ ಪ್ರಸಿದ್ಧವಾಗಿದೆ. ಇದರಲ್ಲಿ ಅನೇಕ ದೇವದೇವಿಯರ ಸಿದ್ಧಿವಿಧಾನಗಳು ಉಕ್ತವಾಗಿವೆ. ಇವುಗಳಲ್ಲಿ ಗಣಪತಿಯ ಸಾಧನವೂ ಒಂದಾಗಿದೆ. ಅದನ್ನು ಯಥಾರೀತಿ ಉದಾಹರಿಸುತ್ತೇವೆ:—

ಓಂ ನಮಃ ಶ್ರೀ ಗಣಪತಯೆ ಓಂ ಆಃ ಗಃ ಶಾಂತಿಂ ಕುರುಷ್ವ ಮಾಂ ಹೀಂ ಭ್ರೂಂ ಹುಂ ಸ್ವಾಹಾ, ಹೃದಯಃ । ಓಂ ರಾಗ ಸಿದ್ಧಿ ಸಿದ್ಧಿ ಸರ್ವಾರ್ಥಂ ಮೆ ಪ್ರಸಾದಯ ಪ್ರಸಾದಯ ಹುಂ ಜ ಜ ಸ್ವಾಹಾ, ಉಪಹೃದಯಃ । ಓಂ ಆಃ ಗಃ ಹುಂ ಸ್ವಾಹಾ, ಓಂ ವರದಕರಾಯ ಸ್ವಾಹಾ, ಓಂ ವಕ್ರೈಕದಂಷ್ಟ್ರೆ ವಿಘ್ನೇಶ ಹುಂ ಫಟ್ ಸ್ವಾಹಾ, ಓಂ ಗಣಪತ್ಯೈ ಸ್ವಾಹಾ, ಓಂ ಶಾಂತಿಂಕರಿ ಭ್ರುಂ ಹಾರಿಣೇಶಡಾಕಿನಿ ಹುಂ ಫಟ್ ಸ್ವಾಹಾ, ಓಂ ಜಃ ಮೇಸಿ ಹುಂ ಕುರು ವಂ ಓಂ ಅನ್ಯೇ ಹೋಃ ಜ ಜ ಸ್ವಾಹಾ ।

ಈ ಮಂತ್ರವು ಅರ್ಧ ಪುರುಷರೂಪಿ ಗಣಪತಿಯನ್ನೂ ಉಳಿದ ಭಾಗ ಗಣಪತಿಯ ಶಕ್ತಿಯನ್ನೂ ಸಹ ಕುರಿತದ್ದಾಗಿದೆ. ಇದಲ್ಲದೆ ಗಣಪತಿಯ ಧ್ಯಾನವನ್ನೂ ಸಹ ಹೇಳಿದೆ:—

ಭಗವಂತಂ ಗಣಪತಿಂ ರಕ್ತವರ್ಣಂ ಜಟಾಮುಕುಟ ಕಿರೀಟಿನಂ ಸರ್ವಾಭರಣಭೂಷಿತಂ ದ್ವಾದಶಭುಜಂ ಲಂಬೋದರೈಕವದನಂ ಅರ್ಧಪರ್ಯಂಕತಾಂಡವಂ ತ್ರಿನೇತ್ರಮುಧ್ಯೆ ಏಕದಂತಂ ಸವ್ಯಭುಜೇಷು ಕುಠಾರ ಶರ ಅಂಕುಶ ವಜ್ರ ಖಂಗ ಶೂಲಂ ಚ ವಾಮಭುಜೇಷು ಮೂಷಲ । ಚಾಪ-ಖಟ್ವಾಂಗ ಅಸೃಕ್ಕಪಾಲ ಶುಷ್ಕಮಾಂಸಕಪಾಲಫಟಕಂ ಚ ರಕ್ತಪದ್ಮೆ ಮೂಷಕೋಪರಿಸ್ಥಿತಮಿತಿ ।*

* ಈ ಧ್ಯಾನದಲ್ಲಿ ಲಂಬೋದರ, ತ್ರಿನಯನ, ಏಕದಂತ, ಇಲಿಯಮೇಲೆ ಕುಳಿತಿರುವ, ಕೆಂಪುವರ್ಣವಿರುವ ಗಣಪತಿಯ ಉಲ್ಲೇಖವಿದೆ. ಇಲ್ಲಿ ಗಣಪತಿಯ ಹೆಸರನ್ನು ಹೇಳಿದೆ, ಆದರೆ ಸೊಂಡಲಿನ ಉಲ್ಲೇಖವಿಲ್ಲ. ಆಯುಧ

ರಕ್ತವರ್ಣ ಜಟಾಮುಕುಟ ಕಿರೀಟವನ್ನು ಧರಿಸಿದ ಸರ್ವಾಭರಣ ಗಳಿಂದ ಶೋಭಿಸುವ, ದ್ವಾದಶ ಭುಜಗಳುಳ್ಳ, ದೊಡ್ಡಹೊಟ್ಟೆಯ ಒಂದೇ ಮುಖವುಳ್ಳ ಅರ್ಧಪರ್ಯಂಕತಾಂಡವ ಮುದ್ರೆಯಲ್ಲಿ ಕುಳಿತಿರುವ ಮೂರು ಕಣ್ಣುಗಳುಳ್ಳ, ಏಕದಂತನಾದ, ಬಲದ ಕೈಯಲ್ಲಿ ಕೊಡಲಿ ಬಾಣ ಅಥವಾ ಖಂಗ, ತ್ರಿಶೂಲಧಾರಿಯಾದ, ಎಡದ ಕೈಯಲ್ಲಿ ಮುಸಲ ಧನುಸ್ಸು, ಖಟ್ವಾಂಗ, ರಕ್ತ ಅಥವಾ ಒಣಗಿದ ಮಾಂಸದ ಪಾತ್ರೆ ಮತ್ತು ಫಟ್ ಇರುವ, ಇಲಿಯ ಮೇಲೆ ಕೆಂಪು ಪದ್ಮದಲ್ಲಿ ಕುಳಿತಿರುವ ಗಣಪತಿ ಯನ್ನು ಧ್ಯಾನಿಸಬೇಕು.

ಬೌದ್ಧ ಧರ್ಮದ ಜೊತೆಯಲ್ಲಿ ಗಣಪತಿಯು ಭಾರತದಿಂದ ಹೊರ ಗಡೆ ದೇಶಗಳಿಗೂ ಹೊರಟನು. ಅಲ್ಲಿ ಅವನ ರೂಪು ವಿಚಿತ್ರವಾಯಿತು. ಧ್ಯಾನಗಳು ಅನೇಕವಾದವು. ಟಿಬೆಟ್ ಮತ್ತು ಇನ್ನು ಕೆಲವು ದೇಶಗಳಲ್ಲಿ ಮಠಮಂದಿರಗಳ ದ್ವಾರಪಾಲಕನನ್ನಾಗಿ ಮಾಡಿದ್ದಾರೆ. ಕೆಲವು ಕಡೆಗಳಲ್ಲಿ ಕೆಲವು ದೇವದೇವಿಯರ ಪದತಳದಲ್ಲಿರುವಂತೆ ಮಾಡಿದ್ದಾರೆ. ಕೆಲವು ವಿಗ್ರಹಗಳಲ್ಲಿ ಅವುಗಳ ಪದ್ಮಾಸನದ ಕೆಳಗಡೆ ಮತ್ತೆ ಕೆಲವು ಕಡೆ ಸಿಂಹಾ ಸನದ ಕೆಳಗಡೆ ಇರುವಂತೆ ಮಾಡಿರುತ್ತಾರೆ. ಅಪರಾಜಿತನೊಡನೆ ಸೇರಿರು ವಂತೆ ಕೆಲವು ಗಣೇಶನ ಮೂರ್ತಿಗಳು ಸಿಕ್ಕುತ್ತಿವೆ. ಕೆಲವು ಕಡೆ ದೇವಿಯ

---

ಗಳಲ್ಲಿ ಕೆಲವು ವಿಲಕ್ಷಣಗಳಿವೆ. ಖಟ್ವಾಂಗ (ಒಂದು ರೀತಿಯ ದಂಡ ಒಂದು ತುದಿಯಲ್ಲಿ ಮನುಷ್ಯನ ತಲೆಯ ಆಕಾರವಿರುತ್ತದೆ). ಮುಸಲ, ರಕ್ತ ಹಾಗು ಒಣಗಿದ ಮಾಂಸದ ಪಾತ್ರೆಗಳು ಇವನ ನೂತನ ಆಯುಧಗಳಾಗಿವೆ. ಎಡಗಡೆ ಕೈಯಲ್ಲಿ ಫಟ್ ಇದೆ. ಅದರ ಅರ್ಥ ಖಚಿತವಾಗಿ ತಿಳಿದು ಬಂದಿಲ್ಲ. ಪ್ರಾಯಶಃ ಬಿಚ್ಚಿದ ಹೆಡೆಯುಳ್ಳ ಸರ್ಪವಿದ್ದಿರಬಹುದು. ಸರ್ಪವು ಒಂದಲ್ಲ ಒಂದು ರೀತಿ ಯಲ್ಲಿ ಗಣಪತಿಯಲ್ಲಿರುತ್ತದೆ. ಅರ್ಧಪರ್ಯಂಕಾಸನ ಅಂದರೆ ಬಲಗಾಲನ್ನು ಎಡಗಾಲ ಮೇಲೆ ಹಾಕಿಕೊಂಡು ಕುಳಿತುಕೊಳ್ಳುವುದು; ಇದರ ಜೊತೆಗೆ ತಾಂಡವ ಮುದ್ರೆಯಲ್ಲಿರುವುದು; ಇದಕ್ಕೆ ಅರ್ಧಪರ್ಯಂಕ ತಾಂಡವ ಮುದ್ರಾಸನವೆಂದು ಕರೆಯುತ್ತಾರೆ.

ಪಾದ ಇವನ ಎಡಪಾದದವೇಲೂ ಮತ್ತೆ ಕೆಲವು ಕಡೆ ಇವನ ಒಂದು ಪಾದ ದೇವಿಯ ಪಾದದವೇಲೂ ಮತ್ತು ಎರಡನೇ ಪಾದ ತಲೆಯ ಮೇಲೂ ಇರುತ್ತದೆ. ಗಣಪತಿ ಅಥವಾ ವಿನಾಯಕನು ವಿಘ್ನಾಂತಕನ ಪಾದದಡಿಯಲ್ಲಿ ಬಿದ್ದಿರುತ್ತಾನೆ. ಕೆಲವು ಕಡೆ ಮಹಾಕಾಲನೆಂಬ ದೇವನು ಅಥವಾ ಮಂಜುಶ್ರೀ ದೇವಸತ್ವನು ಗಣೇಶನನ್ನು ತಳ್ಳಿ ಕುಳಿತಿರುತ್ತಾನೆ. ಈ ಎಲ್ಲಾ ಗಣೇಶನ ವೇಶಭೂಷಣಗಳು ಒಂದೇ ರೀತಿಯಾಗಿಲ್ಲ. ತುರ್ಕಿಸ್ಥಾನದಲ್ಲಿ ಪೈಜಾಮ (ಚಲ್ಲಣ) ವನ್ನು ಧರಿಸಿದ್ದಾನೆ. ಸಿರಸ್ಸಿನಲ್ಲಿ ಕಿರೀಟ ಮತ್ತು ಹಣೆಯಲ್ಲಿ ತಿಲಕವಿರುತ್ತದೆ. ಸಿರಸ್ಸು ಹಾಗು ಬಾಹುಗಳ ಸಂಖ್ಯೆಯಲ್ಲಿ ವ್ಯತ್ಯಾಸಗಳಿವೆ. ಒಂದು ಮೂರ್ತಿಯಲ್ಲಿ ಗಣೇಶನ ಒಂದು ಪಾದ ಇಲಿಯ ಮೇಲೂ ಮತ್ತೊಂದು ಸಿಂಹದ ಮೇಲೂ ಇದೆ. ಇದು ಹೇರಂಬ ಗಣಪತಿ. ಹೇರಂಬ ಗಣಪತಿಯು ಸಿಂಹವಾಹನನಾಗಿರುತ್ತಾನೆ.

ತುರ್ಕಿಸ್ಥಾನದ 'ಬವಜ ಅಲ್ಕಿಕ' ದ ಗುಹೆಗಳ ಒಳಗಡೆ ಗೋಡೆಗಳಲ್ಲಿ ಚಿತ್ರಗಳಿವೆ. ಅವುಗಳಲ್ಲಿ ಒಂದು ಮೂರ್ತಿಯ ಸಿರಸ್ಸು ಆನೆ ಮತ್ತು ಹಂದಿಯ ಮುಖದಂತೆ ಎರಡು ರೂಪಗಳಾಗಿ ಕಾಣುತ್ತದೆ. ಕೆಲವರು ಇದನ್ನು ಗಣಪತಿಯೆಂದು ಮತ್ತೆ ಕೆಲವರು ವರಾಹಮೂರ್ತಿಯೆಂದು ಹೇಳುತ್ತಾರೆ. ಇದೇರೀತಿಯಾದ ಮೂರ್ತಿ ಬೇರೆ ಕಡೆ ಶಿವಪಾರ್ವತಿ ಮತ್ತು ಕಾರ್ತಿಕೇಯರ ಜೊತೆಯಲ್ಲಿ ಇರುವುದರಿಂದ ಇದು ಗಣಪತಿಯೇ ಆಗಿರಬೇಕೆಂದು ಊಹಿಸಬಹುದಾಗಿದೆ. ಈ ಮೂರ್ತಿಯು ಮಂಜುಶ್ರೀ ಕಲ್ಪದಲ್ಲಿ ಹೇಳಿದ ವಿಘ್ನಹಂತಕನ ರೂಪದಲ್ಲಿರುವುದು ಜ್ಞಾಪಕಕ್ಕೆ ಬರುತ್ತದೆ. ಮಹಾಕಾಲನ ಪದತಲದಲ್ಲಿರುವ ಗಣಪತಿಯನ್ನು ಮಂಗೋಲಿಯಾ ದೇಶದವರು ಶಿವನ ಅವತಾರವೆಂದು ಹೇಳುತ್ತಾರೆ. ಪುರಾಣಗಳಲ್ಲಿ ಶಿವನಿಗೆ ಮಹಾಕಾಲನೆಂದು ಹೇಳಿದೆ.

ಈ ಎಲ್ಲಾ ಮೂರ್ತಿಗಳನ್ನು ಅಧ್ಯಯನ ಮಾಡಿದರೆ ಗಣಪತಿಯು ವಿಘ್ನವನ್ನುಂಟುಮಾಡುವ ಒಬ್ಬ ಅಪದೇವತೆಯಾಗಿದ್ದಾನೆಂದು ತಿಳಿದು

ಬರುತ್ತೆ. ಅವನನ್ನು ವಿಘ್ನಹಂತಕ ಅಥವಾ ಅಪರಾಜಿತಾ ದೈವೀಶಕ್ತಿಯು ನಿರ್ವೀರ್ಯನನ್ನಾಗಿ ಮಾಡಿರುತ್ತಾಳೆ. ಆಧ್ಯಾತ್ಮಿಕ ಉನ್ನತಿಯನ್ನು ಹೊಂದಬೇಕೆನ್ನುವ ಸಾಧಕನು ಮೊದಲು ಈ ಶಕ್ತಿಗಳನ್ನು ಜಾಗೃತಗೊಳಿಸಿ ವಿಘ್ನಗಳನ್ನು ಶಾಂತಗೊಳಿಸಿ ಉನ್ನತಿಯನ್ನು ಸಾಧಿಸಬೇಕು. ಕೆಲವು ಕಡೆ ಬಿದ್ದಿರುವ ಗಣೇಶನ ಮೂರ್ತಿಗಳ ಹಣೆಯಲ್ಲಿ ತ್ರಿಪುಂಡ್ರ, ಸಿರಸ್ಸಿನಲ್ಲಿ ಕಿರೀಟ ಮತ್ತು ಕೈಯಲ್ಲಿ ತ್ರಿಶೂಲವಿರುತ್ತದೆ. ಇವುಗಳು ಬೌದ್ಧವಿನಾಯಕ ಮೂರ್ತಿಗಳಲ್ಲ. ಆದರೆ ಪುರಾಣದ ಗಣೇಶನ ಚಿತ್ರಗಳಾಗಿರುತ್ತವೆ. ಈ ಮೂರ್ತಿಗಳು ಹಿಂದೂ ಧರ್ಮದಮೇಲೆ ಬೌದ್ಧಧರ್ಮದ ವಿಜಯದ ಸಂಕೇತವೆಂದು ಮತ್ತು ಬೌದ್ಧ ಧರ್ಮ ಪ್ರಚಾರದಲ್ಲಿ ವಿಘ್ನಸ್ವರೂಪಗಳೆಂದು, ಅವುಗಳನ್ನು ದೈವೀಶಕ್ತಿಯು ನಾಶಮಾಡಿದಳೆಂದು ಕೆಲವರ ಅಭಿಪ್ರಾಯವಾಗಿದೆ.

ಮಹಾಯಾನದ ಮೂಲ ಸಿದ್ಧಾಂತಕ್ಕೆ ವಜ್ರಯಾನವೆಂದು ಕರೆಯುತ್ತಾರೆ. ದೇವತೆಗಳ ಉಪಾಸನೆಗಳು ಬೌದ್ಧ ಸಿದ್ಧಾಂತಕ್ಕೆ ಅನುರೂಪಗಳೆಂದು ಕಂಡುಬಂದರೂ ವಿದ್ವಾಂಸರು ಈ ಅಸಾಮಂಜಸ್ಯವನ್ನು ಒಪ್ಪುವುದಿಲ್ಲ. ಅವರ ಅಭಿಪ್ರಾಯದಂತೆ ಜಗತ್ತು ಸಾರ ರಹಿತವಾದದ್ದು ಅಸತ್ಯ ಹಾಗು ಶೂನ್ಯರೂಪದ್ದು. ಈ ಜಗತ್ತು ಎಷ್ಟು ಮಿಥ್ಯೆಯೋ ಅಷ್ಟೇ ಈ ದೇವತೆಗಳೂ ಮಿಥ್ಯಾರೂಪಗಳೇ. ಸಾಧಕನು ಯಾವುದಾದರೊಂದು ವಿಶೇಷ ಮಂತ್ರವನ್ನು ಜಪಿಸುತ್ತಾ ಅದರ ಭಾವನೆಯಲ್ಲಿ ಮನಸ್ಸನ್ನು ಲೀನಗೊಳಿಸುತ್ತಾನೆ. ಅಂತಃಕರಣವು ಏಕಾಗ್ರತೆಯನ್ನು ಹೊಂದುತ್ತದೆ. ಅವನು ಶೂನ್ಯದಲ್ಲಿ ಲೀನವಾಗುತ್ತಾನೆ. ಅವನ ಉದ್ದೇಶಿತ ದೇವತೆಯು ಪ್ರತ್ಯಕ್ಷವಾಗಿ ಅದರ ಸಿದ್ಧಿಯು ಪ್ರಾಪ್ತವಾಗುತ್ತದೆ. ದೇವತೆಗಳು ಒಂದು ಪಕ್ಷ ಪ್ರತ್ಯಕ್ಷವಾಗದಿದ್ದರೂ ನಮ್ಮ ದೈನಂದಿನ ಕಾರ್ಯಗಳು ನಡೆಯುತ್ತಲಿವೆ. ನಾವು ನಮ್ಮ ಇಚ್ಛೆಗಳಿಗನುಸಾರವಾಗಿ ವ್ಯವಹರಿಸುತ್ತೇವೆ. ನಮ್ಮ ನಮ್ಮ ಮನಸ್ಸನ್ನು ಒಂದು ವಿಷಯದಲ್ಲಿ ಲೀನಗೊಳಿಸಿದರೆ ಅಲ್ಲಿಯ ಶಕ್ತಿಗಳ ಅನುಭವವಾಗಿ ಸಿದ್ಧಿಗಳನ್ನು ಹೊಂದುತ್ತೇವೆ. ಸಾಧ

ಕನ ಚಿತ್ತವು ಎಷ್ಟು ನಿರ್ಮಲವಾಗಿರುವುದೋ ಅಷ್ಟೇ ಸಿದ್ಧಿಗಳ ಲಾಭ ವನ್ನು ಹೊಂದುತ್ತಾನೆ.

ಕೆಲವು ದೇವದೇವಿಯರ ಹೆಸರುಗಳು ಹಿಂದು ಹಾಗು ಬೌದ್ಧ ತಂತ್ರಗಳಲ್ಲಿ ಒಂದೇ ರೀತಿಯಾಗಿ ಬಂದಿವೆ. ಇದರಿಂದ ಎರಡು ಸಂಪ್ರದಾಯದ ಉಪಾಸನಾ ಮಾರ್ಗಗಳು ಒಂದೇ ಎಂದು ಹೇಳಲಾಗುವುದಿಲ್ಲ. ಕೆಲವು ದೇವತೆಗಳನ್ನು ಒಬ್ಬರು ಮತ್ತೊಬ್ಬರಿಂದ ತೆಗೆದುಕೊಂಡಿದ್ದಾರೆ. ಈರೀತಿಯಾಗಿ ತೆಗೆದುಕೊಂಡವರಲ್ಲಿ ತಾರಾದೇವೀ ಒಬ್ಬಳು ಹಾಗು ಗಣಪತಿಯೂ ಸಹ ಉಲ್ಲೇಖಿಸಲ್ಪಟ್ಟಿದ್ದಾನೆ. ಆದರೆ ಕೆಲವು ಬೌದ್ಧ ಧ್ಯಾನಗಳಲ್ಲಿ ವೈದಿಕ ದೇವತೆಗಳಾದ ಶಿವ, ವಿಷ್ಣು, ಇಂದ್ರ ಮತ್ತು ವರುಣರು ಬೌದ್ಧ ದೇವಿಯರ ಪದತಲದಲ್ಲಿ ಬಿದ್ದಿರುವ ಹಾಗೆ ವರ್ಣಿಸಲಾಗಿದೆ. ಗಣೇಶನಿಗೂ ಇದೇ ಗತಿಯಾಗಿದೆ. ವೈದಿಕ ಧರ್ಮವನ್ನು ತಿರಸ್ಕರಿಸಲು ಅಥವಾ ಅಪಮಾನಮಾಡಲು ಈರೀತಿಯಾದ ಧ್ಯಾನಗಳನ್ನು ಹೆಣೆದು; ಆ ಧ್ಯಾನಗಳಿಗನುಸಾರವಾಗಿ ಚಿತ್ರಗಳನ್ನು ಬರೆದಿದ್ದಾರೆ. ಅನಂತರ ಆಧ್ಯಾತ್ಮಿಕ ಶಬ್ದಾಡಂಬರದಿಂದ ವಿಷಯವನ್ನು ಮರೆಮಾಚಲು ಪ್ರಯತ್ನಪಟ್ಟಿದ್ದಾರೆ. ಗಣೇಶ ಮತ್ತು ಬೌದ್ಧಧರ್ಮದ ವಿಷಯವನ್ನು ಕೊನೆಯ ಅಧ್ಯಾಯದಲ್ಲಿ ಪುನಃ ಹೇಳುತ್ತೇನೆ.

ಜೈನ ಧರ್ಮದಲ್ಲಿ ಭಗವಾನ್ ಜಿನೇಂದ್ರನಿಗೆ ಗಣೇಶ ಮತ್ತು ವಿನಾಯಕನೆಂದು ಕರೆಯುತ್ತಾರೆ. ಗಣೇಶನ ಹೆಸರಿನಲ್ಲಿ ಪೃಥಕ್ಕಾಗಿ ಯಾವ ದೇವತೆಯನ್ನೂ ಸಹ ಹೇಳಿಲ್ಲ. ವಿವಾಹದ ಸಮಯದಲ್ಲಿ ವಿನಾಯಕನ ಯಂತ್ರವನ್ನು ಪೂಜಿಸುತ್ತಾರೆ. ಆ ಸಮಯದಲ್ಲಿ ಈ ಕೆಳಗಿನ ಮಂತ್ರವನ್ನು ಹೇಳುತ್ತಾರೆ:—

ಗಣಾನಾಂ ಮುನೀನಾಮಧೀಶಸ್ತ್ವತಸ್ತೆ
ಗಣೇಶಾಖ್ಯಯಾ ಯೇ ಭವಂತಂ ಸ್ತುವಂತಿ ।
ಸದಾ ವಿಘ್ನಸಂದೋಹ ಶಾಂತಿರ್ಜನಾನಾಂ
ಕರೇ ಸಂಲುಠತ್ಯಾಯತ ಶ್ರೇಯಸಾನಾಮ್ ॥

ಕಲೇಃ ಪ್ರಭಾವಾತ್ಕಲುಷಾಶಯಸ್ಯ
ಜನೇಷು ಮಿಥ್ಯಾಮದ ವಾಸಿತೇಷು ।
ಪ್ರವರ್ತಿತೋಽನ್ಯೋ ಗಣರಾಜನಾಮ್ನಾ
ಲಂಬೋದರೋ ದಂತಿಮುಖೋ ಗಣೇಶಃ ।
ರುದ್ರೇಣ ಕಾಮಜ್ವಲಿತೇನ ಗೌರ್ಯಾ
ವಿನೋದಭಾರಾನ್ಮಲಮುತ್‌ಕ್ಷಿಪಿತ್ವಾ ।
ಕೃತಃ ಪುರಾಣೇಷ್ವಿತಿ ವಾಚಾಯಿತ್ವಾ
ಸನ್ಮಂಗಲಂ ತಂ ಕಥಮುದ್ಗಿರಂತಿ ॥

ಯತಸ್ತ್ವಮೇವಾಸಿ ವಿನಾಯಕೋ ಮೆ
ದೃಷ್ಟೇಷ್ಟಯೋಗಾಸವರುದ್ಧಭಾವಃ ।
ತ್ವನ್ನಾಮಮಾತ್ರೇಣ ಪರಾಭವಂತಿ
ವಿಘ್ನಾರಯಸ್ತರ್ಹಿ ಕಿಮತ್ರ ಚಿತ್ರಮ್ ॥

ನೀನು ಮುನಿಗಳಿಗೆ ಅಧಿಪತಿ. ಆದುದರಿಂದ ಜನಗಳು ನಿನ್ನನ್ನು ಗಣಪತಿ ಎಂದು ಸ್ತುತಿಸುತ್ತಾರೆ. ಧ್ಯಾನಿಸಿದವರಿಗೆ ವಿಘ್ನಗಳು ನಾಶವಾಗಿ ಕಲ್ಯಾಣದ ಭಂಡಾರವೇ ಸಿಕ್ಕುತ್ತದೆ. ಕಲಿಗಾಲದ ಪ್ರಭಾವದಿಂದ ಮಿಥ್ಯಾ ಜನರಲ್ಲಿ ಆನೆಯ ಮುಖದ, ಲಂಬೋದರನಾದ ಬೇರೆ ಒಬ್ಬ ಗಣಪತಿ ಹುಟ್ಟಿಕೊಂಡನು. ಕಾಮಪೀಡಿತ ರುದ್ರನಿಂದ ಗೌರಿಯಲ್ಲಿ ಹುಟ್ಟಿದ ತಮೋಗುಣವಿಶಿಷ್ಟ ಗಣಪತಿಯು ಮಂಗಳ ಪ್ರದಾತನು ಹೇಗೆ ಆಗ ಬಲ್ಲನು? ಆದುದರಿಂದ ನೀನೇ (ಜಿನೇಂದ್ರ) ಪರಿಪೂರ್ಣ ವಿನಾಯಕನು. ನಿನ್ನ ನಾಮ ಮಾತ್ರದಿಂದಲೇ ವಿಘ್ನರೂಪಗಳಾದ ಶತ್ರುಗಳು ಪರಾಜಿತ ರಾಗುತ್ತಾರೆ ಎಂದಿದೆ.



# ಅಧ್ಯಾಯ ೧೦

## ವಿಶಾಲ ಭಾರತದಲ್ಲಿ ಗಣಪತಿ

ಭಾರತೀಯ ಸಂಸ್ಕೃತಿಯ ಪ್ರಭಾವದಿಂದ ಪ್ರಭಾವಿತವಾದ ನಮ್ಮ ಸುತ್ತಮುತ್ತಲಿನ ದೇಶಗಳನ್ನು ವಿಶಾಲ ಭಾರತ ಎಂದು ಕರೆಯಬಹುದು. ಅಂದರೆ ಭಾರತೀಯರು ವಲಸೆ ಹೋಗಿ ನೆಲಸಿರುವ ದೇಶಗಳು ಈ ವಿಶಾಲ ಭಾರತದಲ್ಲಿ ಸೇರುತ್ತವೆ. ಭಾರತೀಯ ಸಂಸ್ಕೃತಿಯು ಪಶ್ಚಿಮದಲ್ಲಿ ತುರ್ಕಿಸ್ಥಾನ, ಉತ್ತರದಲ್ಲಿ ಚೀನ ಮತ್ತು ಈಶಾನ್ಯದಲ್ಲಿ ಜಪಾನಿನವರೆವಿಗೂ ಹರಡಿತ್ತು. ಚೀನ ಮತ್ತು ಜಪಾನಿನ ವಿಷಯವನ್ನು ಮುಂದಿನ ಅಧ್ಯಾಯದಲ್ಲಿ ಹೇಳುತ್ತೇನೆ. ಈ ಅಧ್ಯಾಯದಕ್ಷಿ ಪೂರ್ವ ಮತ್ತು ಆಗ್ನೇಯ ಮೂಲೆಯ ದೇಶಗಳ ವಿಚಾರದಲ್ಲಿ ದೃಷ್ಟಿಪಾತಮಾಡಬೇಕಾಗಿದೆ. ಅಲ್ಲಿ ಒಂದಾನೊಂದು ಕಾಲದಲ್ಲಿ ಭಾರತೀಯ ಸಂಸ್ಕೃತಿಯು ವಿಶೇಷವಾಗಿ ಹರಡಿತ್ತು. ಪೂರ್ವದಲ್ಲಿನ ಕಾಂಬೋಡಿಯಾ ಇತ್ಯಾದಿ ದ್ವೀಪಗಳಲ್ಲಿ ಈಗ ಬೌದ್ಧರು ಮತ್ತು ಮುಸಲ್ಮಾನರು ವಾಸಿಸುತ್ತಿದ್ದಾರೆ. ಆದರೂ ಅವರಲ್ಲಿ ಇಂದಿಗೂ-ಭಾರತೀಯ ಸಂಸ್ಕೃತಿ ಹಾಗು ಹಿಂದೂ ಧರ್ಮದ ಸಂಸ್ಕಾರಗಳು ಉಳಿದುಕೊಂಡು ಬಂದಿವೆ. ಅಲ್ಲಿನ ಕೆಲವು ಮಂದಿರಗಳಲ್ಲಿ ಪೂಜೆ ನಡೆಯುತ್ತಿಲ್ಲವಾದರೂ ಅಲ್ಲಿಯ ಕಲಾನೈಪುಣ್ಯತೆಯು ನಮ್ಮ ಗತವೈಭವದ ಚಿರಸ್ಮರಣೀಯ ಸ್ಮಾರಕಗಳಾಗಿವೆ. ಬೋರ್ನಿಯ ಎಂಬ ದ್ವೀಪದ ಬೋರೋಬದರ್ ಎಂಬಲ್ಲಿ ಒಂದು ಸುಂದರವಾದ ಶಿವಮಂದಿರವಿದೆ. ಅದರಂತೆ ಸುಂದರವಾದ ಮಂದಿರವು ಭಾರತದಲ್ಲಿ ಪ್ರಾಯಶಃ ಇರಲಾರದು. ಬಾಲೀ ದ್ವೀಪದ ನಿವಾಸಿಗಳು ಇಂದಿಗೂ ಹಿಂದೂ ಧರ್ಮಾವಲಂಬಿಗಳಾಗಿದ್ದಾರೆ. ಆದುದರಿಂದಲೇ ಅಲ್ಲಿಯ ಸ್ಮಾರಕಗಳು ಸುರಕ್ಷಿತವಾಗಿವೆಯೆಂದು ಹೇಳಬಹುದು.

ಮಲಯಾ ದ್ವೀಪಗಳಲ್ಲಿ ಶಿಲಾ ನಿರ್ಮಿತ ಅಥವಾ ಲೋಹದ ಮೂರ್ತಿಗಳು ಸಾಮಾನ್ಯವಾಗಿ ಭಾರತೀಯ ಮೂರ್ತಿಗಳಂತೆ ಇವೆ.

ಕೆಲವುಗಳಲ್ಲಿ ಮಾತ್ರ ವಿಶೇಷತೆಗಳಿವೆ. ಭಾರತದಲ್ಲಿ ಗಣೇಶನು ಸಾಮಾನ್ಯ ವಾಗಿ ಪದ್ಮಾಸನ, ಸ್ವಸ್ತಿಕಾಸನ ಮತ್ತು ಅರ್ಧಾಸನದಲ್ಲಿ ಕುಳಿತಿರು ತ್ತಾನೆ. ಅವನ ಕಾಲು ಒಂದರ ಮೇಲೊಂದು ಇರುತ್ತದೆ. ಜಾವಾ ದ್ವೀಪದ ಗಣೇಶನು ಮೊಣಕಾಲುಗಳನ್ನು ಮಡಿಚಿಕೊಂಡು ಅಂಗಾಲು ಗಳು ಕಾಣುವಂತೆ ಕುಳಿತಿದ್ದಾನೆ. ಭಾರತದಲ್ಲಿ ಗಣೇಶನ ಸೊಂಡಿಲು ಮಧ್ಯದಲ್ಲಿ ಜೋಲಾಡುತ್ತಿದ್ದು ಸ್ವಲ್ಪ ಎಡಗಡೆಗೆ ತಿರುಗಿರುತ್ತದೆ. ಹೊರ ಗಡೆ ದೇಶಗಳಲ್ಲಿ ಗಣೇಶನ ಸೊಂಡಿಲು ನೇರವಾಗಿ ಮಧ್ಯದಲ್ಲಿ ತಲೆಯ ಮೇಲೆ ಇರುತ್ತದೆ. ಕೆಲವು ಮೂರ್ತಿಗಳಲ್ಲಿ ನರಮುಂಡ ಮಾಲೆಗಳಿರು ತ್ತವೆ ಮತ್ತು ಕೆಲವು ಕಡೆ ಅವನ ಸಿಂಹಾಸನದಲ್ಲಿ ನರಮುಂಡಗಳು ಕೆತ್ತಲ್ಪಟ್ಟಿರುತ್ತವೆ. ಬಾಲೀ ದ್ವೀಪದ 'ಜಮಬರನ್' ಎಂಬ ಸ್ಥಳದ ಮೂರ್ತಿಯ ಸಿಂಹಾಸನದ ನಾಲ್ಕು ಕಡೆಗಳಲ್ಲಿ ಅಗ್ನಿಜ್ವಾಲೆಗಳು ಕೆತ್ತಲ್ಪ ಟ್ಟಿವೆ ಮತ್ತು ಗಣೇಶನ ಕೈಯಲ್ಲಿ ಪಂಜು ಇದೆ.

ಬಾಲೀದ್ವೀಪದ ರಾಜರಾಣಿಯರು ಸತ್ತ ಅನಂತರ ಅವರ ಪ್ರತಿಮೆ ಗಳನ್ನು ಮಾಡಿಸಿ ಅವುಗಳಿಗೆ ದೇವತೆಗಳ ಸ್ಥಾನವನ್ನು ಕೊಡುತ್ತಿದ್ದರು. ಈ ಪ್ರತಿಮೆಗಳ ಬಲಗಡೆ ಗಣೇಶನ ಪ್ರತಿಮೆಯನ್ನು ಸ್ಥಾಪಿಸುತ್ತಿದ್ದರು. ಈ ಗಣಪತಿಯನ್ನು ಸ್ಥಾಪಿಸುವುದರ ಗುಟ್ಟು ತಿಳಿದುಬಂದಿಲ್ಲ. ಆದರೆ ಸ್ವರ್ಗಕ್ಕೆ ಹೋಗುವಾಗ ಬರಬಹುದಾದ ವಿಘ್ನಗಳನ್ನು ನಾಶಮಾಡಲೆಂದು ಸತ್ತ ಅನಂತರ ರಾಜರಾಣಿಯರ ಪ್ರತಿಮೆಗಳ ಪಕ್ಕದಲ್ಲಿ ವಿಘ್ನಹಂತಕ ನಾದ ಗಣೇಶನ ಪ್ರತಿಮೆಯನ್ನು ಸ್ಥಾಪಿಸುತ್ತಿದ್ದರೆಂದು ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯ. 'ಜಂಬರನ'ದಲ್ಲಿಯ ಮೂರ್ತಿಯ ಸಿಂಹಾ ಸನದಲ್ಲಿ ಅಗ್ನಿಶಾಖೆಗಳು ಮತ್ತು ಕೈಯಲ್ಲಿ ಪಂಜು ಇರುವುದರಿಂದ ಇವನು ಪ್ರೇತಾತ್ಮಗಳಿಗೆ ಪಿತೃಲೋಕ ಮತ್ತು ಸ್ವರ್ಗಲೋಕಗಳ ಮಾರ್ಗ ದರ್ಶಕನಾಗಿದ್ದನೆಂದು ಅನುಮಾನಿಸಬಹುದು. ಜಾವಾದಲ್ಲಿಯ ನದಿಯ ಘಾಟಿಗಳಲ್ಲಿ ಮತ್ತು ಇತರ ಭಯಂಕರ ಸ್ಥಳಗಳಲ್ಲಿ ಗಣೇಶನ ಮೂರ್ತಿ

ಗಳಿವೆ. ಈಗ ಹಾಲೆಂಡಿನಲ್ಲಿರುವ ಜಾವದ ಒಂದು ಮೂರ್ತಿಯು ವಿಲಕ್ಷಣವಾಗಿದೆ. ಅಂದರೆ ಪಾಣಿವಾಟದ ಮಧ್ಯೆ ಶಿವಲಿಂಗದ ಸ್ಥಳದಲ್ಲಿ ಗಣೇಶನ ಮೂರ್ತಿ ಇದೆ. ಜಾವದ ಮತ್ತೊಂದು ಮೂರ್ತಿಯು ಬಹಳ ಪ್ರಸಿದ್ಧವಾಗಿದೆ. ಅಷ್ಟು ಸುಂದರವಾದ ಮೂರ್ತಿಯು ಭಾರತದಲ್ಲಿ ಎಲ್ಲಿಯೂ ಸಹ ಇಲ್ಲವೆಂದು ಹೇಳುತ್ತಾರೆ. ಈ ಮೂರ್ತಿಗೆ ಎರಡು ಕಣ್ಣುಗಳು ಮತ್ತು ನಾಲ್ಕು ಕೈಗಳಿವೆ. ಒಂದು ಹಸ್ತದಲ್ಲಿ ಮುರಿದ ಕೋರೆ ಮತ್ತೊಂದರಲ್ಲಿ ಅನ್ನದ ಪಾತ್ರೆ, ಮೂರನೇ ಹಸ್ತದಲ್ಲಿ ಪರಶು (ಕೊಡಲಿ) ನಾಲ್ಕನೆಯ ಹಸ್ತದಲ್ಲಿ ಜಪಮಾಲೆ ಇದೆ. ಸೊಂಡಿಲು ನೇರವಾಗಿ ಮಧ್ಯದಲ್ಲಿ ತೂಗಾಡುತ್ತಾ ಎಡಗಡೆಯ ಅನ್ನದ ಪಾತ್ರೆಯ ಕಡೆ ತಿರುಗಿಕೊಂಡಿದೆ. ಇವುಗಳಲ್ಲದೆ ಶಿವನ ಜೊತೆಯಲ್ಲಿರುವ ಗಣೇಶನ ವಿಗ್ರಹಗಳೂ ಸಹ ಸಿಕ್ಕುತ್ತವೆ.

ಭಾರತೀಯ ಸಂಸ್ಕೃತಿಯ ಪ್ರವಾಹದ ಒಂದು ಭಾಗ ಮಲಯಾ ದ್ವೀಪದ ಕಡೆಗೂ ಮತ್ತೊಂದು ಭಾಗ ಬರ್ಮಾ ಮತ್ತು ಥೈಲಾಂಡ್ ಕಡೆಗೂ ಹರಿಯಿತು. ಬರ್ಮಾದಲ್ಲಿ ಬಹಳ ಗಣೇಶನ ಮೂರ್ತಿಗಳು ಸಿಕ್ಕುತ್ತವೆ. ದಕ್ಷಿಣ ಬರ್ಮಾದಲ್ಲಿ ಹೀನಯಾನ ಬೌದ್ಧ ಸಂಪ್ರದಾಯವು ಬಹಳ ಪ್ರಚಾರದಲ್ಲಿದ್ದುದರಿಂದ ಅಲ್ಲಿ ಗಣೇಶನ ಮೂರ್ತಿಗಳು ಸಿಕ್ಕುವುದು ಕಷ್ಟ. ಆದರೂ ವ್ಯಾಪಾರಿಗಳ ಮೂಲಕ ಅನ್ಯ ಹಿಂದೂ ದೇವತೆಗಳ ಜೊತೆಯಲ್ಲಿ ಹೋಗಿ ಅಲ್ಲಿಯ ಹಿಂದೂ ಮಂದಿರಗಳಲ್ಲಿ ಗಣೇಶನ ಕೆಲವು ಮೂರ್ತಿಗಳು ಸ್ಥಾಪಿಸಲ್ಪಟ್ಟಿವೆ. ಉತ್ತರ ಬರ್ಮಾದಲ್ಲಿ ಮಹಾಯಾನ ಬೌದ್ಧ ಸಂಪ್ರದಾಯವು ಪ್ರಚಾರದಲ್ಲಿತ್ತು. ಅಸ್ಸಾಮ್, ಪೂರ್ವ ಬಂಗಾಳ ಮತ್ತು ಮಣಿಪುರಗಳ ಕಡೆಯಿಂದ ಹಿಂದೂ ಧರ್ಮವು ಬರ್ಮವನ್ನು ಪ್ರವೇಶಿಸಿತ್ತು. ಆದುದರಿಂದ ಅಲ್ಲಿ ಗಣೇಶನ ಮೂರ್ತಿಗಳು ಹೇರಳವಾಗಿ ಸಿಕ್ಕುತ್ತಲಿದ್ದವು. ಬರ್ಮಾದಲ್ಲಿ ಗಣೇಶನ ಹೆಸರು 'ಮಹಾಪಿಯನ್' ಎಂದಾಯಿತು. ಪಿಯನ್ ಎಂಬುದು ವಿನಾಯಕನ ವಿಕೃತ ರೂಪವಾಗಿದೆ. ವಿಘ್ನವು ಪಿಯನ್ ಆಗಿದ್ದರೂ ಆಗಿರಬಹುದು. ಶಾಮ (ಥೈಲಾಂಡ್) ದೇಶದ ನಿವಾಸಿಗಳ ಮತ್ತು ಮಂಗೋಲಿಯನ್ನರ

ಸಂಸ್ಕೃತಿಯಲ್ಲಿ ಆರ್ಯಸಂಸ್ಕೃತಿಯು ಓತಪ್ರೋತವಾಗಿ ಬೆಳೆದು ಬಂದಿದೆ. ಮೊದಲು ಅಲ್ಲಿ ವೈದಿಕ ಧರ್ಮವೇ ರಾಜಧರ್ಮವಾಗಿದ್ದಿತು. ಇಂದು ಅವರು ಬೌದ್ಧರಾಗಿದ್ದರೂ ಅವರ ರಾಜ್ಯಾಭಿಷೇಕಾದಿ ಕಾರ್ಯಗಳು ವೈದಿಕ ಪದ್ಧತಿಯಂತೆಯೇ ನಡೆಯುತ್ತಲಿವೆ. ಈ ದೇಶಗಳಲ್ಲಿ ಕೆಲವು ಗಣೇಶನ ಮೂರ್ತಿಗಳು ಸಿಕ್ಕುತ್ತವೆ. ಅವುಗಳಲ್ಲಿ ಕೆಲವು ಬಹಳ ಸುಂದರ ವಾಗಿವೆ. ಈ ಗಣೇಶನ ಮೂರ್ತಿಗಳ ನಿರ್ಮಾಣ ಕಾಲದಲ್ಲಿ ಅಯೂಥಿ ಯನ್ (ಅಯೋಧ್ಯಾ) ರಾಜಧಾನಿಯಾಗಿದ್ದಿತು. ಆದುದರಿಂದ ಈ ಮೂರ್ತಿಗಳನ್ನು ಅಯೂಥಿಯನ್ ಶೈಲಿಯ ಮೂರ್ತಿಗಳೆಂದು ಕರೆಯುತ್ತಾರೆ

ಶಾಮ್ ದೇಶಕ್ಕೆ ಪೂರ್ವದಲ್ಲಿ ಕಾಂಬೋಡಿಯಾ ದೇಶವಿದೆ. ಇದಕ್ಕೆ ಹಿಂದೆ ಕುಂಬಜ ದೇಶವೆಂದು ಕರೆಯುತ್ತಿದ್ದರು. ಇದು ಮೂರ್ತಿ ಗಳ ದೇಶವೆಂದು ಪ್ರಸಿದ್ಧಿ ಹೊಂದಿದೆ. ಹಿಂದಿನ ರಾಜಧಾನಿಯಾದ ಅಂಕುರವಟವು ಪ್ರತಿಮೆಗಳ ಗಣಿ ಎಂದು ಕರೆಯುತ್ತಾರೆ. ಇಲ್ಲಿಯ ನಿವಾಸಿಗಳು ಬೌದ್ಧರಾಗಿದ್ದರೂ ಇಂದಿನವರೆವಿಗೂ ಅನೇಕ ಹಿಂದೂ ಪದ್ಧತಿಗಳು ಆಚರಣೆಯಲ್ಲಿರುವುದು ಕಂಡುಬರುತ್ತದೆ. ಕಾಂಬೋಡಿಯಾ ದಲ್ಲಿಯೂ ಗಣೇಶನ ಮೂರ್ತಿಗಳು ಸಿಕ್ಕುತ್ತವೆ. ಇಲ್ಲಿ ಗಣೇಶನನ್ನು 'ಕೆನೆಸ್' ಎುದು ಕರೆಯುತ್ತಾರೆ. ವಿಶಾಲ ಭಾರತದ (ಜಾವಾ ಮತ್ತು ಬಾಲಿ) ಕೆಲವು ಚಿತ್ರಗಳನ್ನು ಇಲ್ಲಿ ಕೊಡಲಾಗಿದೆ.

ಭಾರತದ ಪೂರ್ವದೇಶಗಳಲ್ಲಿ ಗಣೇಶನ ಮೂರ್ತಿಗಳು ಬೌದ್ಧ ಮೂರ್ತಿಗಳಂತೆ ಕಂಡುಬಂದಿವೆ. ಗಣೇಶನು ವಜ್ರಯಾನ ಸಂಪ್ರದಾಯ ದಂತೆ ಧ್ಯಾನಾಸಕ್ತನಾಗಿರುತ್ತಾನೆ. ಈ ಮೂರ್ತಿಗಳನ್ನು ಪೂಜಿಸುವವರು ಸಾಂಪ್ರದಾಯಿಕವಾಗಿ ಗಣೇಶನಿಗೆ ಬುದ್ಧನ ಪದವಿಯನ್ನು ಕೊಡು ತ್ತಿದ್ದರು, ಅಥವಾ ಬೋಧಿಸತ್ವನ ಪ್ರತೀಕವೆಂದು ತಿಳಿಯುತ್ತಿದ್ದರು. ಈ ಪ್ರವೃತ್ತಿಯು ನಮಗೆ ಚೀನ ಮತ್ತು ಜಪಾನಿನ ಆಧ್ಯಾತ್ಮ ಜೀವನ ದಲ್ಲಿ ಕಂಡುಬರುತ್ತದೆ.



ಬಾಲಿದ್ವೀಪದ ಗಣೇಶ



ಜಾವಾದ್ವೀಪದ ಗಣೇಶ

# ಅಧ್ಯಾಯ ೧೧

## ಚೀನ ಮತ್ತು ಜಪಾನಿನ ಆಧ್ಯಾತ್ಮಿಕ ಜೀವನದಲ್ಲಿ ವಿನಾಯಕನ ಸ್ಥಾನ

ಚೀನ ಮತ್ತು ಭಾರತಗಳ ಸಂಬಂಧವು ಬಹಳ ಪ್ರಾಚೀನವಾದುದು. ಆ ದೇಶದಲ್ಲಿ ಬೌದ್ಧ ಧರ್ಮವು ಪ್ರವೇಶಿಸಿದ ಮೇಲೆ ಇದರ ಸಂಬಂಧ ಮತ್ತೂ ದೃಢವಾಯಿತು ಕೆಲವು ಭಾರತದ ವಿದ್ವಾಂಸರು ಮತ್ತು ಬೌದ್ಧ ಭಿಕ್ಷುಗಳು ಧರ್ಮಪ್ರಚಾರಕ್ಕಾಗಿ ಚೀನಕ್ಕೆ ಹೋಗುತ್ತಿದ್ದರು. ಅಲ್ಲಿಯ ಕೆಲವು ಯಾತ್ರಿಕರು ತೀರ್ಥಯಾತ್ರೆಗಾಗಿ ಭಾರತಕ್ಕೆ ಬರುತ್ತಿದ್ದರು. ಕೆಲವು ಚೀನದ ಪಂಡಿತರು ನಾಲಂದಾ ವಿಶ್ವವಿದ್ಯಾಲಯದಲ್ಲಿ ಅಭ್ಯಾಸಮಾಡಿ ಭಾರತದಿಂದ ಸಂಸ್ಕೃತ ಹಾಗು ಪಾಲಿಗ್ರಂಥಗಳನ್ನು ತೆಗೆದುಕೊಂಡು ಹೋದರು. ಆದುದರಿಂದಲೇ ಭಾರತದ ಕಲೆಯ ಪ್ರಭಾವವನ್ನು ಚೀನೀಕಲೆಯಲ್ಲಿ ಕಾಣಬಹುದಾಗಿದೆ. ಭಾರತೀಯ ಸಂಸ್ಕೃತಿಯು ಮಂಗೋಲಿಯಾ ಮತ್ತು ದಕ್ಷಿಣ ಸೈಬೀರಿಯಾದವರೆವಿಗೂ ಒಂದಲ್ಲ ಒಂದು ರೀತಿಯಾಗಿ ಹರಡಿದ್ದಿತು. ಸೈಬಿರಿಯಾದ ಕಾಡಿನಲ್ಲಿರುವ ಮಂತ್ರವಾದಿ ಪುರೋಹಿತನನ್ನು ಇಂದೂ ಕೂಡ 'ಸಮನ್' (ಸಂಸ್ಕೃತದಲ್ಲಿ ಶ್ರಮಣ) ಎಂದು ಕರೆಯುತ್ತಾರೆ.

"ತನುಹು ಆಂಗ್" ಗುಹೆಯ ಗೋಡೆಗಳಲ್ಲಿ ಚಿತ್ರಗಳನ್ನು ಕೆತ್ತಿದ್ದಾರೆ. ಆ ಚಿತ್ರಗಳು ಅಜಂತಾದಲ್ಲಿರುವ ಚಿತ್ರಗಳನ್ನು ಹೋಲುತ್ತವೆ. ಅವುಗಳನ್ನು ಭಾರತೀಯ ಶಿಲ್ಪಿಗಳು ಚಿತ್ರಿಸಿರಬೇಕು, ಅಥವಾ ಅವರ ಚೀನೀ ಶಿಷ್ಯರಿಂದ ಆ ಕಾರ್ಯ ನಡೆದಿರಬೇಕು. ಅಲ್ಲಿ ಬುದ್ಧನ ವಿಗ್ರಹದ ಜೊತೆಯಲ್ಲಿ ಸೂರ್ಯ, ಚಂದ್ರ ಮತ್ತು ಕಾಮದೇವಾದಿಗಳೊಡನೆ ಗಣೇಶನ ಮೂರ್ತಿಯೂ ಸಹ ಇದೆ. ಈ ಗಣಪತಿಯು ತಲೆಯಲ್ಲಿ ಪೇಟವನ್ನೂ, ಪಾದಗಳಲ್ಲಿ ಪಾದರಕ್ಷೆಗಳನ್ನು ಧರಿಸಿದ್ದಾನೆ.

'ತುಂಗಶಯನ್' ಗುಹೆಗಳಲ್ಲಿರುವ ಮೂರ್ತಿಗಳ ನಿರ್ಮಾಣದ ಕಾಲ ವಿ.ಸಂ. ೫೮೮ ಎಂದಿದೆ. ಇಷ್ಟು ಪ್ರಾಚೀನ ಮೂರ್ತಿಗಳು ಭಾರತದಲ್ಲಿ ಇವೆಯೋ ಅಥವಾ ಇಲ್ಲವೋ ತಿಳಿದುಬಂದಿಲ್ಲ. ಭಾರತದ ಮೂರ್ತಿಗಳ ನಿರ್ಮಾಣದ ಕಾಲವನ್ನು ಎಲ್ಲಿಯೂ ಸೂಚಿಸಿಲ್ಲ. ತುಂಗ ಹಿಸಯನ್ ಗುಹೆಯಲ್ಲಿ ಒಂದು ವಿನಾಯಕನ ಮೂರ್ತಿ ಇದೆ. ಇದನ್ನು ಆನೆಗಳ ಅಮಾನುಷರಾಜನ ಪ್ರತಿಮೆ ಎಂದು ಚೀನೀ ಅಕ್ಷರದಲ್ಲಿ ಬರೆದಿದೆ. ಅಲ್ಲಿಯೇ ನಾಗ ಮತ್ತು ಮತ್ಸ್ಯರುಗಳ ಅಮಾನುಷ ಮೂರ್ತಿಗಳೂ ಸಹ ಇವೆ.

ಚೀನಾದಲ್ಲಿ ಗಣೇಶನು ವಿನಾಯಕನೆಂದು ಪ್ರಸಿದ್ಧನಾಗಿರಬೇಕು. ಚೀನಾ ಯಾತ್ರಿಕರು ತಮ್ಮ ಜೊತೆಯಲ್ಲಿ ಇವನನ್ನು ತೆಗೆದುಕೊಂಡು ಹೋಗಿರಬೇಕು. ಚೀನಾಕ್ಕೆ ಹೋದಮೇಲೆ ಅಲ್ಲಿ ಬಹಳ ಪ್ರತಿಭಾ ಸಂಪನ್ನನಾಗಿರಬೇಕು. ಒಂದು ಜಾತಕ ಕಥೆ ಹೀಗಿದೆ:--ಬುದ್ಧನ ತಾಯಿಯು ಒಂದು ಸ್ವಪ್ನವನ್ನು ಕಂಡಳು. ಒಂದು ಆನೆಯು ಅವಳ ಗರ್ಭದಲ್ಲಿ ಪ್ರವೇಶಿಸಿತಂತೆ. ಅನಂತರ "ತಥಾಗತನು" ಹುಟ್ಟಿದನಂತೆ ಆದುದರಿಂದ ಚೀನಾದಲ್ಲಿ ಆನೆಯು ಬುದ್ಧನ ಪ್ರತೀಕವೆಂದು ತಿಳಿಯುತ್ತಿದ್ದರು. ಪ್ರಾಯಶಃ ಗಜಮುಖ ಗಣೇಶನು ಇದರಿಂದ ಗೌರವಕ್ಕೆ ಪಾತ್ರನಾಗಿರಬೇಕು.

ಬೌದ್ಧರಲ್ಲಿ ಯೋಗಾಚಾರವೆಂಬ ಒಂದು ಸಂಪ್ರದಾಯವಿದ್ದಿತು. ಅದರ ದಾರ್ಶನಿಕ ಸಿದ್ಧಾಂತದ ವಿವರಣೆಯನ್ನು ಶ್ರೀಪಾದ ಶಾಸ್ತ್ರಿಯವರ "ದ್ವಾದಶದರ್ಶನ ಸೋಪಾನಾವಳಿ" ಯಲ್ಲಿ ಸರಳ ಸಂಸ್ಕೃತದಲ್ಲಿ ಹೇಳಲಾಗಿದೆ. ಅದರ ಹೆಸರಿನಂತೆ ನಿರ್ವಾಣಕ್ಕಾಗಿ ಸಮಾಧಿಸ್ಥನಾಗಲು ಯೋಗಾಭ್ಯಾಸವನ್ನು ಪ್ರಧಾನವಾಗಿ ಮಾಡಬೇಕೆಂದು ಹೇಳಿದೆ. ಈ ಸಂಪ್ರದಾಯವುಉತ್ತರ ಭಾರತದಲ್ಲಿ ಬಹಳ ಪ್ರಚಾರದಲ್ಲಿದ್ದಿತು. ಅನಂತರ ಚೀನಾದೇಶಕ್ಕೆ ಹೋಗಿ ಪ್ರಸಿದ್ಧಿಗೆ ಬಂದಿತು. ಕಾಲಾಂತರದಲ್ಲಿ ಯೋಗಾ

ಭ್ಯಾಸಕ್ಕೆ ಬದಲಾಗಿ ಮಂತ್ರತಂತ್ರಗಳ ವಿಧಿವಿಧಾನಗಳು ಪ್ರಚಾರಕ್ಕೆ ಬಂದವು. ಇದಾದ ಅನಂತರ ಮಹಾಯಾನದಲ್ಲಿ ಅಂತರ್ಗತವಾದ ವಜ್ರಯಾನವು ತಾಂತ್ರಿಕ ಸಂಪ್ರದಾಯದ್ದಾಗಿ ನಾಮಾಂತರವನ್ನು ಹೊಂದಿತು. ಈ ರೀತಿಯಾಗಿ ತಾಂತ್ರಿಕ ಪೂಜಾವಿಧಾನವು ಚೀನಾ ದೇಶಕ್ಕೆ ಹೋಗಿ ಪ್ರಚಾರಕ್ಕೆ ಬಂದಿತು. ವಜ್ರಯಾನದ ಪಂಡಿತರು ಈ ಅಭಿಪ್ರಾಯವನ್ನು ಒಪ್ಪುವುದಿಲ್ಲ. ಯಂತ್ರಮಂತ್ರಗಳಿಂದ ಈ ಸಂಪ್ರದಾಯವು ಬದಲಾಯಿಸಿತೆಂದು ಅವರು ನಂಬುವುದಿಲ್ಲ. ವಜ್ರಯಾನ ಸಂಪ್ರದಾಯವು ಮೊದಲಿನಿಂದಲೂ ಹೀಗೆಯೇ ಇದ್ದಿತೆಂದು ಅವರ ಮತ. ಪರಿಶುದ್ಧ ಯೋಗಾಭ್ಯಾಸವು ಉನ್ನತ ಅಧಿಕಾರಿಗಳಿಗೆ ಮಾತ್ರ ಸಾಧ್ಯ. ಸಾಮಾನ್ಯ ಅಧಿಕಾರಿಗಳಿಗೆ ಅವರ ಯೋಗ್ಯತೆಗನುಗುಣವಾಗಿ ಅನೇಕ ಮಂತ್ರ ಮತ್ತು ಆಚರಣೆಗಳಿವೆ. ಈ ಸಾಧನೆಗಳು ಸಾಧಕನಿಗೆ ಮುಂದಿನ ಉನ್ನತ ಸ್ಥಾನಗಳನ್ನು ಗಳಿಸಲು ಸಹಾಯಕಗಳಾಗುತ್ತವೆ.

ಪ್ರಪ್ರಥಮದಲ್ಲಿ ಈ ತಾಂತ್ರಿಕ ವಿಧಾನಗಳನ್ನು ಚೀನಾದೇಶಕ್ಕೆ ತೆಗೆದುಕೊಂಡು ಯಾರು ಹೋದರೆಂಬುದನ್ನು ಹೇಳುವುದು ಕಷ್ಟ. ಆದರೂ ಯಾರೋ ವಿದ್ವಾಂಸರು ಈ ವಿಧಾನಗಳನ್ನು ತೆಗೆದುಕೊಂಡು ಹೋಗಿರಬೇಕು. ವಿ.ಸಂ. ೬೮೮ ರಲ್ಲಿ ಹುಯನ್‌ತ್ಸಾಂಗನು ಭಾರತಕ್ಕೆ ಬಂದಿದ್ದನು. ಅವನು ಅನೇಕವರ್ಷಗಳು ನಾಲಂದಾ ವಿಶ್ವವಿದ್ಯಾಲಯದಲ್ಲಿದ್ದುಕೊಂಡು ಮಹಾರತ್ನಸಿಂಹನಿಂದ ದೀಕ್ಷೆಯನ್ನು ಪಡೆದು ಯೋಗಾಭ್ಯಾಸವನ್ನು ಕಲಿತನು. ಅನಂತರ ತನ್ನ ಜೊತೆಯಲ್ಲಿ ಅನೇಕ ಗ್ರಂಥಗಳನ್ನು ತೆಗೆದುಕೊಂಡು ಹೋದನು. ಅವುಗಳಲ್ಲಿ ತಂತ್ರಗ್ರಂಥಗಳೂ ಸಹ ಇದ್ದಿರಬೇಕು. ಏತಕ್ಕೆಂದರೆ ಅಂದಿನ ಸಮಯದಲ್ಲಿ ಉತ್ತರ ಭಾರತವು ತಾಂತ್ರಿಕ ಪೂಜಾ ಪದ್ಧತಿಯಿಂದ ಆವರಿಸಿತ್ತು. ಹುಯನ್‌ತ್ಸಾಂಗನ ಮರಣದ ಅನಂತರ ವಿ.ಸಂ. ೭೭೩ ರಲ್ಲಿ ಉತ್ಕಲ ರಾಜನಾದ ಶುಭಾಕರಸಿಂಹನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ತನ್ನ ಗುರುವಾದ ಧರ್ಮಗುಪ್ತನ ಆದೇಶದಂತೆ

ತಂತ್ರಮಾರ್ಗದ ಪ್ರಚಾರಕ್ಕಾಗಿ ಚೀನಾದೇಶಕ್ಕೆ ಹೋಗಿದ್ದನು. ಅಲ್ಲಿ ಅವನ ಹೆಸರು 'ಸುಫ್ರೋ ಕಿಯೆಲೋ ಸಾಂಹೋ' ಎಂದಾಯಿತು. ಎಂಭತ್ತು ವರ್ಷದ ಮುದುಕನಾಗಿದ್ದರೂ ಬಹಳ ಪರಿಶ್ರಮಿಯಾಗಿದ್ದ. ಅವನು ಹಲವು ಗ್ರಂಥಗಳನ್ನು ಚೀನೀ ಭಾಷೆಗೆ ಅನುವಾದ ಮಾಡಿದನು. ಅವುಗಳಲ್ಲಿ ಮಹಾವೈರೋಚನಸೂತ್ರದ ಚೀನೀ ಅನುವಾದವು ಪ್ರಸಿದ್ಧವಾದುದು. ಅವನು ಎಂಭತ್ತೊಂಭತ್ತನೇ ವಯಸ್ಸಿನಲ್ಲಿ ವಿ.ಸಂ. ೭೯೩ರಲ್ಲಿ ಮರಣಹೊಂದಿದನು.

ಅಂದಿನ ಸಮಯದಲ್ಲಿ ಚೀನಾದೇಶದಲ್ಲಿ 'ಹುಯಿಕುವೊ' ಎಂಬ ಒಬ್ಬ ಸಿದ್ಧಪುರುಷನಿದ್ದನು. ತಾಂತ್ರಿಕ ಕ್ರಿಯೆ ಮತ್ತು ಯೋಗಾಭ್ಯಾಸದಲ್ಲಿ ಅವನು ನಿಪುಣನಾಗಿದ್ದನು. ಅವನು ತನ್ನ ಏಳನೇ ವರ್ಷದಲ್ಲಿ ಸಿಂಹಳ ಪಂಡಿತನಾದ ಅಮೋಘವಜ್ರನಿಂದ ದೀಕ್ಷೆಪಡೆದಿದ್ದನು. ಅಮೋಘವಜ್ರನು ಚೀನಾದ ಸಂಸ್ಕೃತಿಯನ್ನರಿತ ಭಾರತೀಯ ವಿದ್ವಾಂಸರಲ್ಲಿ ಒಬ್ಬನಾಗಿದ್ದನು. ಚೀನ ಮತ್ತು ಜಪಾನಿನಲ್ಲಿ ತಂತ್ರಪ್ರಚಾರಮಾಡಿದವರಲ್ಲಿ ಅಮೋಘವಜ್ರನ ಪಾತ್ರ ಹಿರಿದಾದುದು. 'ಪೋಮು ಕುಫ್ರೋ ಕೋಲೋ' ಎಂಬುದು ಅವನ ಚೀನೀಯ ಹೆಸರು. ಚೀನಾದ ಚಕ್ರವರ್ತಿಯು ಅವನಿಗೆ ತಾಕ್ವಾಂಗ್ ಕ್ವಾನ್ ತ್ಸ ಉ (ತ್ರಿಪಿಟಕ ಭದಂತ) ಎಂಬ ಬಿರುದನ್ನು ಕೊಟ್ಟನು. ಅವನು ವಿ.ಸಂ. ೮೩೮ ರಲ್ಲಿ ಚಕ್ರವರ್ತಿ ತುಯಿತ್ಸುನ್ನನಿಗೆ ಒಂದು ವರದಿಯನ್ನು ಕೊಟ್ಟನು. ಅದರಲ್ಲಿ "ನಾನು ನನ್ನ ಬಾಲ್ಯದ ಹದಿನಾರು ವರ್ಷ ನನ್ನ ಗುರು ವಜ್ರಬೋಧನ ಸೇವೆಯನ್ನು ಮಾಡಿ (ಸಂ. ೭೭೬ ರಿಂದ ೭೮೯ ರ ವರೆವಿಗೆ) ಯೋಗಾಭ್ಯಾಸವನ್ನು ಕಲಿತಿದ್ದೇನೆ. ಅನಂತರ ಭಾರತದಲ್ಲಿ ಸುತ್ತಾಡಿ ಸೂತ್ರ ಹಾಗು ಶಾಸ್ತ್ರಗ್ರಂಥಗಳನ್ನು ಕೂಡಿಹಾಕಿದೆ. ಅವುಗಳಲ್ಲಿ ಚೀನಾದೇಶಕ್ಕೆ ತೆಗೆದುಕೊಂಡು ಬಂದಿರುವ ಗ್ರಂಥಗಳು ಐದುನೂರಕ್ಕೂ ಹೆಚ್ಚಾಗಿವೆ. ಸಂ. ೮೦೫ ರಲ್ಲಿ ರಾಜಧಾನಿಗೆ ಹಿಂತಿರುಗಿದೆ. ಅಂದಿನಿಂದ ಇಂದಿನ

ವರೆವಿಗೆ ೭೭ ಗ್ರಂಥಗಳನ್ನು ಅನುವಾದ ಮಾಡಿದ್ದೇನೆ" ಎಂದು ಬರೆದಿದೆ. ಇದಾದ ಮೂರು ವರ್ಷಗಳ ಅನಂತರ ಅವನ ೭೦ ನೇ ವಯಸ್ಸಿನಲ್ಲಿ ಮರಣ ಹೊಂದಿದನು. ಅವನ ಮರಣಾನಂತರ ಚಕ್ರವರ್ತಿಯು 'ತಾಂಪಿಯನ್ ಕಂಜ ಕ್ವಾಂಜ ತ್ಸಾಸ್ ತ್ಸಾಸ್ (ತ್ರಿಪಿಟಕ ಭದಂತ ಮಾಪಾವಾಗ್ನಿ ಶುದ್ಧ ವಿಸ್ತೃತ ಬುದ್ಧಿ) ಎಂಬ ಉಪಾಧಿಯನ್ನಿತ್ತು ಗೌರವಿಸಿದನು. ಅವನ ಅನಂತರವೂ ಕೆಲವು ಪಂಡಿತರು ಚೀನಕ್ಕೆ ಹೋಗಿದ್ದರು. ಭಾರತದಲ್ಲಿ ಮುಸಲ್ಮಾನರ ಆಳ್ವಿಕೆಯು ಪ್ರಾರಂಭವಾದ ಮೇಲೆ ಚೀನಾದೇಶಕ್ಕೆ ಹೋಗುವುದು ನಿಂತಿತು.

ಚೀನ ಮತ್ತು ಜಪಾನಿನಲ್ಲಿ ತಾಂತ್ರಿಕ ಮತವನ್ನು ಕುಲಿಂಜಶಿತಿಯನ್ ಅಥವಾ ಕಾಂಜ್ಗೀತೇನ್ ಎಂದು ಕರೆಯುತ್ತಾರೆ. ಈ ಮತದ ಉಪಾಸನಾ ಪದ್ಧತಿಯನ್ನು ತಿಳಿಯುವುದಕ್ಕೆ ಮೊದಲು ವಜ್ರಯಾನದ ದಾರ್ಶನಿಕ ಸಿದ್ಧಾಂತ ಮತ್ತು ಭಾಷಾಗತವಾದ ಅಭಿಪ್ರಾಯಗಳನ್ನು ತಿಳಿಯಬೇಕು. ಯೋಗಿಗಳು ಸಾಮಾನ್ಯವಾಗಿ ತಮ್ಮ ಅನುಭವ ಹಾಗು ವಿಚಾರಗಳನ್ನು ಸ್ಪಷ್ಟವಾಗಿ ಹೇಳದೆ ನಿಗೂಢವಾದ ಭಾಷೆಯಲ್ಲಿ ಹೇಳುತ್ತಿದ್ದರು. ಆ ಭಾಷೆಯನ್ನು ತಮ್ಮ ಶಿಷ್ಯರಿಗೆ ಹೇಳಿಕೊಡುತ್ತಿದ್ದರು. ಆ ಅಭಿಪ್ರಾಯಗಳನ್ನು ಲಕ್ಷಣಾವೃತ್ತಿ ಅಥವಾ ವ್ಯಂಜನಾವೃತ್ತಿಗಳಿಂದ ತಿಳಿದುಕೊಳ್ಳಬಹುದಾಗಿದ್ದಿತು. ಆ ಭಾಷೆಗೆ ಸಮಾಧಿ ಭಾಷೆಯೆಂದು ಕರೆಯುತ್ತಾರೆ. ಯೋಗ ಮತ್ತು ತಂತ್ರಗಳ ರಹಸ್ಯಗಳನ್ನು ಈ ಸಮಾಧಿ ಭಾಷೆಯಲ್ಲಿ ಬಚ್ಚಿಡಲಾಗುತ್ತಿತ್ತು. ಅದರ ರಹಸ್ಯಗಳನ್ನು ತಿಳಿದುಕೊಂಡು ಅದರ ಭಾವಗಳನ್ನು ಚಿತ್ರಗಳ ರೂಪದಲ್ಲಿ ಚಿತ್ರಿಸುತ್ತಿದ್ದರು. ಒಂದೊಂದು ಸಮಯದಲ್ಲಿ ರಹಸ್ಯವನ್ನು ತಿಳಿಯದೆ ಕೆಲವು ಚಿತ್ರಗಳನ್ನು ಚಿತ್ರಿಸುತ್ತಿದ್ದರು. ಅಂಥಹ ಚಿತ್ರಗಳು ಅಪ್ರಯೋಜಕಗಳಾಗುತ್ತಿದ್ದವು.

ಸಾಂಸಾರಿಕ ಜೀವಿಗಳಿಗೆ ಮಂಗಳ ಉಂಟಾಗಲೆಂದು ನಿರ್ವಿಕಾರಿ ಜ್ಞಾನಿಯಾದ ಕುಂತುಬ್ಜಾನ್‌ಗ್ಯೂ (ಸಮಂತಭದ್ರ) ನನು ಈ ರೀತಿ

ಯಾಗಿ ಆಶೀರ್ವದಿಸಿದನು. “ಯಾವ ದೃಶ್ಯಾದೃಶ್ಯಗಳು ಅಂದರೆ ಬಂಧ ಅಥವಾ ನಿರ್ವಾಣವಿದೆಯೋ ಅದೆಲ್ಲವೂ ಶೂನ್ಯ. ಅದಕ್ಕೆ ವಿದ್ಯಾ ಮತ್ತು ಅವಿದ್ಯಾ ಎಂಬ ಎರಡು ಮಾರ್ಗಗಳಿವೆ. ಎರಡು ಲಕ್ಷ್ಯಗಳಿವೆ. (ಸಂಸಾರ, ನಿರ್ವಾಣ). ಈ ಮಾರ್ಗ ಮತ್ತು ಲಕ್ಷ್ಯಗಳು ವಿದ್ಯೆ ಮತ್ತು ಅವಿದ್ಯೆಗಳ ವಿಚಿತ್ರ ಲೀಲೆಗಳಾಗಿವೆ. ಇದೆಲ್ಲಕ್ಕೂ ಆಧಾರ ಬ್ರಹ್ಮ; ಅವನು ಸ್ವತಂತ್ರ; ಪರಿಶುದ್ಧ ಮತ್ತು ಮಾನವನಿಗಿಂತ ಶ್ರೇಷ್ಠನಾದವನು. ಅವನನ್ನು ನಿರ್ವಾಣವೆಂದಾಗಲೀ ಅಥವಾ ಸಂಸಾರಿ ಎಂದಾಗಲೀ ಕರೆಯಲಾಗುವುದಿಲ್ಲ. ಅವನನ್ನು ಸಾಕ್ಷಾತ್ಕಾರಮಾಡಿಕೊಳ್ಳುವುದೆಂದರೆ ಜ್ಞಾನಿಯಾಗುವುದೆಂದರ್ಥ. ಜ್ಞಾನಿಯಾಗದಿದ್ದರೆ ಸಂಸಾರಚಕ್ರದಲ್ಲಿ ಬೀಳುವುದೇ ಆಗಿದೆ. ಮೂರುಲೋಕದ ಎಲ್ಲಾ ಪ್ರಾಣಿಗಳು ಈ ಅವರ್ಣ್ಯ ವಸ್ತುವಿನ ಸಾಕ್ಷಾತ್ಕಾರ ಮಾಡಿಕೊಳ್ಳಲಿ” ಎಂಬುದೇ ಕುಂತುಬ್ಜಾನ್ಗ್ಯೂನನ ಆಶೀರ್ವಾದ.

ಮಾನವನಿಂದ ವರ್ಣಿಸಲಾಗದ ಜಗತ್ತಿಗೆ ಆಧಾರಭೂತವಾದ ನೇತಿ ನೇತಿ ಎಂದು ಹೇಳುವ ವಸ್ತುವೇ ಸಾಧಕನ ಲಕ್ಷ್ಯವಾಗಿದೆ. ಈ ಧರ್ಮಧಾತುವಿಗೆ ಎರಡು ರೂಪುಗಳುಂಟು. ಅದು ಸಾಧಕನಿಗೆ ಎರಡು ರೂಪಗಳಲ್ಲಿ ಪ್ರಕಟವಾಗುತ್ತದೆ. ಅದರಲ್ಲಿ ಒಂದು ಪುರುಷರೂಪ ಒಂದು ಸ್ತ್ರೀರೂಪ. ಈ ಸ್ತ್ರೀಪುರುಷರನ್ನು ಸೇರಿಸಿ ಒಂದು ಯುಗಲ ಮೂರ್ತಿಯನ್ನು ಮಾಡಿದರೆ ಅದೇ ಧರ್ಮಧಾತುವಿನ ಪ್ರತೀಕವಾಗುತ್ತದೆ. ಸ್ತ್ರೀ ಪುರುಷರು ಪರಸ್ಪರ ಆಲಿಂಗನ ಮಾಡಿಕೊಂಡಿರುವಂತೆ ಮೂರ್ತಿಗಳನ್ನು ಮಾಡಿರುತ್ತಾರೆ.* ಅದು ಅವರ ಅವಿನಾಭಾವ ಸಂಬಂಧವನ್ನು ಸೂಚಿಸುತ್ತದೆ. ಪುರುಷಮೂರ್ತಿಯು ಉಪಾಯ ಮತ್ತು ಮಹಾ ಕರುಣೆಯ ಪ್ರತೀಕವಾಗಿರುತ್ತದೆ. ಸ್ತ್ರೀಮೂರ್ತಿಯು ಪ್ರಜ್ಞಾ, ಶೂನ್ಯ, ಶಾಂತಿ, ಮತ್ತು ಆನಂದದ ರೂಪವಾಗಿರುತ್ತದೆ. ಆ ಎರಡು ಮೂರ್ತಿಗಳ

---

* ಶ್ರೀ ಚಕ್ರಸಂಭಾರ ತಂತ್ರ.

ವಸ್ತ್ರಾಭರಣಗಳ ಅಲಂಕಾರ ಮತ್ತು ಆಯುಧಗಳು ತಂತ್ರೋಕ್ತಗಳಾಗಿರುತ್ತವೆ. ಸಾಧನಮಾಲಾ ಗ್ರಂಥದಲ್ಲಿ ಪ್ರಜ್ಞಾ ಮತ್ತು ಉಪಾಯದ ಸ್ವರೂಪಗಳನ್ನು ವಿಸ್ತಾರವಾಗಿ ಹೇಳಿದೆ:—

ಅನಿತ್ಯಾಃ ಕ್ಷಣಿಕಾ ನಿರಾತ್ಮಾನಃ ಸ್ವಪ್ನೇಂದ್ರಜಾಲಸದೃಶಾಃ ಪ್ರತಿಭಾಸಮಾತ್ರಾಃ ಆದಿಶಾಂತಾಃ ಪ್ರಕೃತಿಪರಿಶುದ್ಧಾಃ ಅಭಾವಾ ಅಜಾತಾ ಅನುತ್ಪನ್ನಾಃ ತಥಾಭೂತಕೋಟಿಶೂನ್ಯಾಃ ಸರ್ವಧರ್ಮಾ ಇತಿ ಶೂನ್ಯತಾಯಾ ಅಧಿವಚನಮ್ । ತೃಷ್ಣಾವಶಾತ್ ಅಮೀ ಸತ್ವಾ ಗಂಭೀರಂ ಪ್ರತೀತ್ಯಸಮುತ್ಪಾದ ಕರ್ಮಕ್ರಿಯಾವತಾರಾಯ ಧರ್ಮಂ ದೇಶಯಿಷ್ಯಾಮೀತಿ ಕರುಣಾಯಾಪ್ಯಧಿವಚನಮ್ । ಅತಏವಾಹ ಭಗವಾನ್ ಸಮಾಜಾದೌ ಶೂನ್ಯತಾಕರುಣಾಭಿನ್ನಂ ಬೋಧಿಚಿತ್ತಮಿತಿ ಸ್ಮೃತಮ್ ।

(ಸಾಧನಮಾಲಾ ವಾದಿರಾಟ್ ಸಾಧನೆ)

ಎಲ್ಲಾ ವಸ್ತುಗಳು ಅನಿತ್ಯ, ಕ್ಷಣಿಕ, ನಿರಾತ್ಮ, ಸ್ವಪ್ನಸದೃಶ, ಇಂದ್ರಜಾಲದಂತೆ, ಆದಿಶಾಂತ, ಪ್ರಕೃತಿಪರಿಶುದ್ಧ, ಅಭಾವ ಅಜಾತ ಹುಟ್ಟಿಲ್ಲದವುಗಳಾಗಿವೆ ಎಂಬುದೇ ಶೂನ್ಯದ ಮೊದಲ ವಾಕ್ಯವಾಗಿದೆ. ಎಲ್ಲಾ ಪ್ರಾಣಿಗಳು ಕಾರ್ಯಕಾರಣ ಶೃಂಖಲೆಯಲ್ಲಿ ಬಂಧಿಸಲ್ಪಟ್ಟಿವೆ. ನಾನು ಅವರಿಗೆ ಧರ್ಮೋಪದೇಶವನ್ನು ಮಾಡುತ್ತೇನೆ. ಕರುಣೆ ಮತ್ತು ಶೂನ್ಯಗಳ ಅಭೇದದಿಂದ ಬೋಧಿಚಿತ್ತವು (ಜ್ಞಾನ) ಉಂಟಾಗುವುದೆಂದು ಭಗವಂತನು ಹೇಳಿದ್ದಾನೆ. ನಿರ್ಮಲವಾದ ಬೋಧಿಚಿತ್ತವೆ ಧರ್ಮಧಾತುವಿನ ಸಾಕ್ಷಾತ್ಕಾರ ಅಥವಾ ನಿರ್ವಾಣಪದ ಪ್ರಾಪ್ತಿಯಾಗಿರುತ್ತದೆ. ಇದರ ಸಾಕ್ಷಾತ್ಕಾರವಾಗಿ ಸಾಧನೆಗಳನ್ನು ಸಾಧಕನು ಮಾಡುತ್ತಾನೆ. ಈ ಅಭ್ಯಾಸದ ಅವಸ್ಥೆಯಲ್ಲಿ ಯಾರಿಗೆ ಶುದ್ಧವಿಜ್ಞಾನ ಉದಯವಾಗುತ್ತದೆಯೋ ಅವನನ್ನು ದೇವತೆ ಎಂದು ಕರೆಯುತಾರೆ. ಸಾಧಕನು ಕ್ರಮವಾಗಿ ಪ್ರಮುದಿತಾ, ವಿಮಲಾ, ಪ್ರಭಾಕರೀ, ಅರ್ಚಿಷ್ಮತೀ, ಸುದುರ್ಜಯಾ, ಅಭಿಮುಖೀ, ದೂರಂಗಮಾ, ಅಚಲಾ, ಸಾಧು

ಮತೀ ಮತ್ತು ಧರ್ಮಾಭೇದ್ಯ ಎಂಬ ಸಮಾಧಿಗಳಲ್ಲಿ ಸಮಾಧಿಸ್ಥನಾಗಿ ಅದ್ವಯವಾದ ಬುದ್ಧಿಪದವನ್ನು ಹೊಂದುತ್ತಾನೆ. ಧರ್ಮಧಾತುವಿನ ನಿಜ ವಾದ ಸಾಕ್ಷಾತ್ಕಾರವು. ಯೋಗಿಯಾದವನಿಗೆ ಮಾತ್ರಸಾಧ್ಯ. ಈ ರೂಪ ವನ್ನು ಚಿತ್ರಗಳ ಮೂಲಕ ಚಿತ್ರಿಸಿರುತ್ತಾರೆ. ಈ ಚಿತ್ರಗಳಲ್ಲಿ ಜಗತ್ತಿನಲ್ಲಿ ಕಾರ್ಯರೂಪದಲ್ಲಿರುವ ಆಧ್ಯಾತ್ಮಿಕ ಶಕ್ತಿಗಳನ್ನು ಸಂಕೇತ ರೂಪದಲ್ಲಿ ತೋರಿಸಿರುತ್ತಾರೆ. ಕೆಲವುಕಡೆ ದೇವತೆಗಳ ಬೀಜಮಂತ್ರಗಳನ್ನು ಹೇಳಿರು ತ್ತಾರೆ. ಕೆಲವುಕಡೆ ಕೇವಲ ಹೆಸರು ಮತ್ತು ಅವುಗಳ ಆಕೃತಿಗಳನ್ನು ಮಾಡಿರುತ್ತಾರೆ. ರೌದ್ರಿ ಶಕ್ತಿಗೆ 'ಗಂ' ಎಂದು ಹೇಳುತ್ತಾರೆ. ಈಶಾನ ಅಥವಾ ಈಶಾನೀ ಎಂದು ಬರೆಯುತ್ತಾರೆ. ಮಹಾದೇವನ ಚಿತ್ರವನ್ನು ಬರೆಯುವುದೂ ಉಂಟು. ಇಂಥ ಚಿತ್ರಗಳನ್ನು ಮಂಡಲಗಳೆಂದು ಕರೆ ಯುತ್ತಾರೆ. ಕಾಂಗೀರ್ತೇ ಸಂಪ್ರದಾಯದಲ್ಲಿ ಧರ್ಮಧಾತುವಿನಂತೆಯೂ ಮತ್ತು ಅದರ ಸಂಭೋಗಕಾಯದಂತೆ ಕಾಣುವ ಎರಡು ರೂಪಗಳಿವೆ. ಮೊದಲನೆಯದು ಬಾಹ್ಯದೃಗ್ವಿಷಯಾತ್ಮಕವಾದುದು. ಅದನ್ನು ಗರ್ಭ ಧಾತು ಎಂದು ಕರೆಯುತ್ತಾರೆ. ಎರಡನೆಯದು ಆಂತರಿಕ ಹಾಗು ಆಧ್ಯಾತ್ಮಿಕವಾದುದು. ಅದನ್ನೇ ವಜ್ರಧಾತುವೆಂದು ಕರೆಯುತ್ತಾರೆ. ಅವೆರಡನ್ನೂ ಮಂಡಲಗಳಲ್ಲಿ ತೋರಿಸುತ್ತಾರೆ. ಗರ್ಭಧಾತುವಿನ ಮಂಡಲದಲ್ಲಿ ಕೆಲವು ಪರಿವರ್ತನೆಗಳಾಗಿವೆ. ಅದನ್ನು ಶುಭಾಕರಸಿಂಹನು ಪ್ರಚಾರ ಮಾಡಿದನೆಂದು ಹೇಳುತ್ತಾರೆ. ಅದರ ಪ್ರಾಚೀನ ಮತ್ತು ಪ್ರಚಲಿತ ರೂಪಗಳಲ್ಲಿ ಎರಡು ಮುಖ್ಯ ಭೇದಗಳಿವೆ. ಒಂದರಲ್ಲಿ ಪ್ರಾಚೀನ ದೇವತೆಗಳನ್ನು ಚಿತ್ರಿಸದೆ ಕೇವಲ ಹೆಸರುಗಳನ್ನು ಹೇಳ ಲಾಗಿದೆ. ಎರಡನೆಯದರಲ್ಲಿ ವಿನಾಯಕನಿರುವುದಿಲ್ಲ. ಮೊದಲೇ ಇದ್ದ ವರುಣ, ವೈಶ್ರವಣ ಮತ್ತು ನವಗ್ರಹಗಳ ಜೊತೆಗೆ ವಿನಾಯಕನನ್ನು ಅನಂತರ ಅಮೋಘವಜ್ರನು ಸೇರಿಸಿದನೆಂದು ಹೇಳುತ್ತಾರೆ. ಆಚಿತ್ರ ಗಳಲ್ಲಿರುವ ದೇವತೆಗಳ ಮತ್ತು ಅವರ ಸ್ಥಾನಗಳ ಉಲ್ಲೇಖವು ಎಲ್ಲಿಯೂ

ಇಲ್ಲ. ಮಧ್ಯದಲ್ಲಿರುವ ಅಷ್ಟದಲ ಕಮಲದಲ್ಲಿ ವೈರೋಚನನಿದ್ದಾನೆ. ತಾಂತ್ರಿಕ ಯೋಗಾಚಾರದಲ್ಲಿ ವೈರೋಚನನು ವಿಶ್ವಾತ್ಮನಾಗಿದ್ದಾನೆ. ಮಹಾವೈರೋಚನನ ಸೂತ್ರವನ್ನು ಅನುವಾದ ಮಾಡಿದ, ಶುಭಾಕರನು ತನ್ನ ಗ್ರಂಥಗಳಲ್ಲಿ ವೈರೋಚನನ ಪೂಜಾದಿಗಳಿಗೆ ಸ್ಥಾನವನ್ನು ಕೊಟ್ಟಿ ರಬಹುದು.

ವಜ್ರಧಾತು ಮಂಡಲವನ್ನು ಅಮೋಘವಜ್ರನು ತನ್ನ ಗುರು ವಜ್ರಬೋಧಿಯಿಂದ ಕಲಿತನೋ ಅಥವಾ ತಂತ್ರಗ್ರಂಥಗಳ ಆಧಾರದಿಂದ ತಾನೇ ಪ್ರಚಾರಕ್ಕೆ ತಂದನೋ ಹೇಳುವುದು ಕಷ್ಟ. ಗರ್ಭಧಾತುವಿನ ಚಿತ್ರದಲ್ಲಿ ವಿನಾಯಕನನ್ನು ನವಗ್ರಹ, ರಾಕ್ಷಸಾದಿ ಉಪದೇವತೆಗಳ ಜೊತೆಯಲ್ಲಿ ಸೇರಿಸದೆ ಅವನಿಗೆ ಬೇರೆ ಸ್ಥಳವನ್ನು ಕೊಡಲಾಗಿದೆ. ವಜ್ರ ಧಾತುವಿನಲ್ಲಿಯೂ ಅವನಿಗೆ ಅದೇ ಸ್ಥಾನವನ್ನು ಕೊಡಲಾಗಿದೆ. ಈ ಮಂಡಲದಲ್ಲಿ ವಿನಾಯಕನ ಐದು ವಿಗ್ರಹಗಳಿವೆ. ನಾಲ್ಕುಜನ ವಿನಾ ಯಕರು ನಾಲ್ಕು ದಿಕ್ಕುಗಳಲ್ಲಿದ್ದುಕೊಂಡು ರಕ್ಷಿಸುತ್ತಾರೆ. ಐದನೇ ವಿನಾಯಕನು ಉತ್ತರ ದಿಕ್ಕಿನ ವಿನಾಯಕನ ಕೆಳಗಡೆ ಇದ್ದಾನೆ. ಉತ್ತರ ದಲ್ಲಿರುವ ವಿನಾಯಕನು ವಜ್ರಮುಖ ಅಸಿಧರನು, ದಕ್ಷಿಣದಲ್ಲಿ ವಜ್ರ ಭಕ್ಷ ಮಾಲಾಧರ, ಪೂರ್ವದಲ್ಲಿ ವಜ್ರಚಿಹ್ನ ಛತ್ರಧರ ಮತ್ತು ಪಶ್ಚಿಮ ದಲ್ಲಿ ವಜ್ರವಾಸಿ ಧನುರ್ಧರರಿದ್ದಾರೆ. ಗರ್ಭಧಾತುವಿನ ವಿನಾಯಕನೂ ಸಹ ಉತ್ತರ ಮುಖದವನಾಗಿದ್ದಾನೆ. ಎರಡು ಚಿತ್ರಗಳಲ್ಲಿಯೂ ವಿನಾ ಯಕನ ಕೈಯಲ್ಲಿ ಮೂಲೀ (ಮೂಲಂಗಿ) ಇದೆ. ಟಿಬೆಟ್ ಮತ್ತು ನೇಪಾಲದಲ್ಲಿ ಮೂಲಿಯನ್ನು ಹಿಡಿದಿರುವ ಮೂರ್ತಿಗಳು ಸಿಕ್ಕಿವೆ. ಕಾಲಾಂತರದಲ್ಲಿ ಮುರಿದ ದಂತವೇ ಮೂಲಿಯಾಗಿರಬೇಕು. ಈ ದೇಶ ಗಳಲ್ಲಿ ಮೂಲಿಗೆ ಸಂಬಂಧಿಸಿದ ಕಥೆಗಳೇನೂ ಸಿಕ್ಕುವುದಿಲ್ಲ.

ಚೀನಾದಲ್ಲಿ ವೈನಾಯಕ ಸಂಪ್ರದಾಯವು ಲೋಪವಾಗಿದೆ. ಸಂ. ೧೦೦೪ ರಲ್ಲಿ ಜೇನತ್ಸುಂಗನು ಒಂದು ಆಜ್ಞೆಯನ್ನು ಹೊರಡಿಸಿ ವಿನಾಯ

ಕನ ಪೂಜೆಯು ಚತುರ್ಗ್ರಂಥದ ಸೂತ್ರವನ್ನು ತ್ರಿಪಿಟಕದ ಜೊತೆಯಲ್ಲಿ ಸೇರಿಸಕೂಡದು, ಮತ್ತು ಈ ರೀತಿಯಾದ ಗ್ರಂಥಗಳನ್ನು ಚೀನೀಭಾಷೆಗೆ ಅನುವಾದಿಸಕೂಡದೆಂದು ತಿಳಿಸಿದನು. ಈ ರೀತಿಯಾಗಿ ಇತರ ಸಂಪ್ರದಾಯಗಳನ್ನು ಬದಿಗೊತ್ತಿರಬೇಕು. ಈ ಜನಗಳು ತಾಂತ್ರಿಕ ಭ್ರಷ್ಟಾಚಾರಗಳನ್ನು ಬಹಳವಾಗಿ ಪ್ರಚಾರಮಾಡಿರಬೇಕು. ಅದು ಬೌದ್ಧ ಧರ್ಮಕ್ಕೆ ಅಸಂಗತವಾದುದು ಹಾಗು ಸಂಸ್ಕೃತಿಗೆ ವಿರುದ್ಧವಾದುದಾಗಿರಬೇಕು. ಭಾರತದಲ್ಲಿ ಈ ದುಷ್ಟಪದ್ಧತಿಯು ಪ್ರಚಾರವಾದ ಸಮಯದಲ್ಲಿ ರಾಜಕೀಯ ಸ್ವಾತಂತ್ರ್ಯವು ಕ್ಷೀಣಿಸುತ್ತಿತ್ತು. ಇದನ್ನು ತಡೆಯಲು ಯಾವ ಶಕ್ತಿಯೂ ಉಳಿದಿರಲಿಲ್ಲ. ಮಂಡಲಗಳ ಈ ಚಿತ್ರವು ಕಾಂಗೀತೀನ್ ಸಂಪ್ರದಾಯದ ಬಾಹ್ಯಪೂಜೆಯ ಒಂದು ಅಂಗವಾಗಿದೆ. ಆಂತರಿಕ ಪೂಜೆಯು ಜಪಾನಿನಲ್ಲಿದ್ದಿತೆಂದು ಹೇಳಬಹುದು. ಏತಕ್ಕೆಂದರೆ ಚೀನದಲ್ಲಿ ಗುಪ್ತಪೂಜೆಗೆ ಸಂಬಂಧಿಸಿದ ಮೂರ್ತಿಗಳು ಸಿಕ್ಕುವುದಿಲ್ಲ. ಪ್ರಾಯಃ ಚೇನತ್ಸುಂಗ ಮತ್ತು ಅವನ ಅನಂತರದ ರಾಜರುಗಳು ಆ ಮೂರ್ತಿಗಳನ್ನು ನಾಶಮಾಡಿರಬೇಕು. ಚೀನಾದಿಂದ ಜಪಾನಿಗೆ ಬೌದ್ಧ ಧರ್ಮವು ಹರಡಿದ್ದಿತು. ಅಲ್ಲಲ್ಲಿ ಬೌದ್ಧಮಠಮಂದಿರಗಳು ಸ್ಥಾಪಿಸಲ್ಪಟ್ಟಿದ್ದವು. ಜಪಾನಿನ ತಕಾಶಿಯ ಕಮದೇರಾ ಮಂದಿರದಲ್ಲಿ ಕಾಬೋದಾಯಿಶಿ ಎಂಬ ಬೌದ್ಧಸಾಧು ಇದ್ದನು. ಅಲ್ಲಿ ಮಹಾವೈರೋಚನ ಸೂತ್ರದ ಚೀನೀ ಅನುವಾದ ಗ್ರಂಥವು ಸಿಕ್ಕಿತು. ಅದನ್ನು ಓದಿ ಅರ್ಥಮಾಡುವವರು ಜಪಾನಿನಲ್ಲಿ ಯಾರೂ ಇರಲಿಲ್ಲ. ಅಲ್ಲಿಯ ಚಕ್ರವರ್ತಿಯ ಅನುಮತಿಯನ್ನು ಪಡೆದು ಆ ಸಾಧುವು ಚೀನಾದೇಶಕ್ಕೆ ಬಂದನು. ಅಲ್ಲಿ ಸಂಚರಿಸುತ್ತಿರುವಾಗ ಚೀನಾದ ಸುಪ್ರಸಿದ್ಧ ಸಾಧು ಹುಯಿಕುವೋನ ದರ್ಶನವಾಯಿತು. ಹುಯಿಕುವೋ ಕಾಬೋದಾಯಿಶಿಯನ್ನು ನೋಡಿ 'ನಾನು ಬಹಳ ದಿವಸಗಳಿಂದ ನಿನ್ನ ನಿರೀಕ್ಷೆಯಲ್ಲಿದ್ದೆ. ನೀನು ಬರುವುದು ನನಗೆ ತಿಳಿದಿತ್ತು' ಎಂದನು. ಅನಂತರ ಅವನು ಕಾಬೋ

ದಾಯಿಶಿಗೆ ಯೋಗದ ವೈರೋಚನ ದೀಕ್ಷೆಯನ್ನು ಕೊಟ್ಟು ಗರ್ಭಧಾತು ಮತ್ತು ವಜ್ರಧಾತುಗಳ ಚಿತ್ರಗಳ ರಹಸ್ಯಗಳನ್ನು ಉಪದೇಶಿಸಿದನು. ಅಮೋಘವಜ್ರ, ಹುಯಿಕುವೋ ಮತ್ತು ಕಾಬೋದಾಯಿಶಿ ಇವರು ಸಿದ್ಧಪುರುಷರೆಂದು ಹೇಳುತ್ತಾರೆ. ದೀಕ್ಷಾ ಸಮಯದಲ್ಲಿ ಹುಯಿಕುವೋನ ತಪಃಪ್ರಭಾವದಿಂದ ಕಾಬೋದಾಯಿಶಿಯು ಆದಿಬುದ್ಧ (ಜ್ಞಾನಿ) ನಾಗಿ, ವೈರೋಚನನೊಡನೆ ತಾದಾತ್ಮ್ಯವನ್ನು ಹೊಂದಿದನು. ಅನಂತರ ಕಾಬೋದಾಯಿಶಿಯು ಜಪಾನಿಗೆ ಹಿಂತಿರುಗಿ ಬಂದು ಅಲ್ಲಿಯ ಚಕ್ರವರ್ತಿ ಮತ್ತು ಎಲ್ಲಾ ಮಠಾಧಿಪತಿಗಳಿಗೂ ಸಂಪ್ರದಾಯದ ರಹಸ್ಯಗಳನ್ನು ಉಪದೇಶಿಸಿ ಭಗವಂತನಾದ ವೈರೋಚನನ ದರ್ಶನವನ್ನು ಎಲ್ಲರಿಗೂ ಮಾಡಿಸಿದನು. ಕಾಬೋದಾಯಿಶಿಯು ಜಪಾನಿನಲ್ಲಿ ಶಿಂಗನ್ ಎಂಬ ಸಂಪ್ರದಾಯವನ್ನು ಪ್ರಚಾರಮಾಡಿದನು. ಅದು ತಂತ್ರಮೂಲದ ಮಹಾಯಾನ ಮತಾನುಕೂಲವಾದುದು. ತನ್ನ ಗುರು ಹುಯಿಕುವೋನ ಉಪದೇಶದಿಂದ ಕಾಬೋದಾಯಿಶಿಯು ಪರಿವರ್ಧಿಸಿದ ವಿಷಯವೇನೆಂದು ಹೇಳುವುದು ಕಷ್ಟ.

ಕಾಂಗೀತೇನಿನ ಪೂಜೆಯು ಉಪಾಸನೆಯ ಹೃದಯವಾಗಿತ್ತು. ಕಾಂಗೀತೇನ್ ಎಂಬುದು ಒಂದು ಯುಗಲಮೂರ್ತಿ. ಇದರ ಮೂಲಕ ವಿಶ್ವಾತ್ಮಾ ಮತ್ತು ಆದಿತತ್ತ್ವದ ಯೋಗವು ಒಂದೇ ಎಂದು ತೋರಿಸಲಾಗುತ್ತಿತ್ತು. ವಿಶ್ವಾತ್ಮವೈರೋಚನನನ್ನು ಬುದ್ಧನ ರೂಪದಲ್ಲಿಯೂ ಮತ್ತು ಆದಿತತ್ತ್ವವನ್ನು ಹನ್ನೊಂದು ಸಿರಸ್ಸುಳ್ಳ ಬೋಧಿಸತ್ವ ಅವಲೋಕಿತೇಶ್ವರನ ರೂಪದಲ್ಲಿಯೂ ಚಿತ್ರಿಸುತ್ತಿದ್ದರು. ಆದರೆ ಅವಲೋಕಿತೇಶ್ವರನು ಸ್ತ್ರೀರೂಪದಲ್ಲಿಯೂ ಮತ್ತು ವೈರೋಚನನು ಗಣೇಶನ ರೂಪದಲ್ಲಿಯೂ ಇರುತ್ತಿದ್ದರು. ಇದರ ಸಂಬಂಧದಲ್ಲಿ ಒಂದು ಜಾತಕ ಕಥೆ ಇದೆ.*

ಮಹೇಶ್ವರನಿಗೆ ೩೦೦೦ ಮಕ್ಕಳಿದ್ದರು. ಅವರಲ್ಲಿ ೧೦೦೦ ಜನರು

* ಬುದ್ಧನ ಪೂರ್ವಜನ್ಮದ ಕಥೆಗೆ ಜಾತಕ ಕಥೆ ಎಂದು ಹೇಳುತ್ತಾರೆ.

ಒಳೆಯುವವರಿದ್ದರು. ಅವರ ಮುಖಂಡನ ಹೆಸರು ಸೇನಾಯಕ. ಉಳಿದ ೨೦೦೦ ಜನರು ದುಷ್ಟರು ಈ ದುಷ್ಟರ ಮುಖಂಡ ವಿನಾಯಕ. ಸೇನಾಯಕನು ವಸ್ತುತಃ ಬೋಧಿಸತ್ವ ಅವಲೋಕಿತೇಶ್ವರನೇ ಆಗಿದ್ದನು. ವಿನಾಯಕನು ದುಷ್ಟನೂ ಕ್ರೂರಿಯೂ ಆಗಿದ್ದನು. ಅವನ ಕ್ರೂರ ಸ್ವಭಾವವನ್ನು ಹೋಗಲಾಡಿಸಲು ಸ್ತ್ರೀರೂಪವನ್ನು ಧರಿಸಿ ವಿನಾಯಕನನ್ನು ಮೋಹಿಸಿದನು. ವಿನಾಯಕನೂ ಸಹ ಮೋಹಿತನಾಗಿ ಅವಳನ್ನು ವಿವಾಹವಾಗಲು ಆಶಿಸಿದನು. ಆಗ ಸ್ತ್ರೀರೂಪಧಾರಿ ಅವಲೋಕಿತೇಶ್ವರನು ಸದ್ಧರ್ಮದಲ್ಲಿ ವಿನಾಯಕನು ದೀಕ್ಷಿತನಾದರೆ ವಿವಾಹವಾಗುವುದಾಗಿ ಹೇಳಿದನು. ವಿನಾಯಕನು ಒಪ್ಪಿ ವಿವಾಹವಾದನು. ಈರೀತಿ ಸ್ತ್ರೀರೂಪಿಯಾಗಿ ಅವಲೋಕಿತೇಶ್ವರನು ವಿನಾಯಕನೊಂದಿಗೆ ಸೇರಿದನು. ಸಿಂಹಳದಲ್ಲಿ ಅಮೋಘವಜ್ರನಿದ್ದಷ್ಟು ಕಾಲ ಅವಲೋಕಿತೇಶ್ವರನನ್ನು ಲೋಕನಾಥನೆಂದು ಕರೆಯುತ್ತಿದ್ದರು. ಲೋಕನಾಥನಿಗೆ ಎಂಟು ರೂಪಗಳಿದ್ದವು. ಅವುಗಳಲ್ಲಿ ಗಣನಾಥನೂ ಒಬ್ಬ. ಆದುದರಿಂದ ಕಾಂಗೀತೇನ್‌ನಲ್ಲಿರುವ ಪುರುಷಮೂರ್ತಿ ಗಣನಾಥನೇ ಅವಲೋಕಿತೇಶ್ವರನಾಗಿದ್ದಾನೆ. ಸ್ತ್ರೀಮೂರ್ತಿಯು ಅವನ ಶಕ್ತಿ ಎಂದು ಹೇಳಬಹುದು.

ಕಾಂಗೀತೇನ್ ಮೂರ್ತಿಯು ಲೋಹದಿಂದ ಮಾಡಿದ್ದಾಗಿರಬೇಕೆಂದು ಒಂದು ನಿಯಮವಿದೆ. ಅದರ ಎತ್ತರ ೩೩ ಅಂಗುಲಕ್ಕಿಂತ ಹೆಚ್ಚಾಗಿರಬಾರದು. ಎರಡು ಮೂರ್ತಿಗಳು ಪರಸ್ಪರ ಎದುರಾಗಿ ಆಲಂಗಿಸಿಕೊಂಡಿರಬೇಕು. ಪಾದದವರೆವಿಗೂ ಬಟ್ಟೆ ಇಳಿಬಿಟ್ಟಿರಬೇಕು ಮತ್ತು ವಿನಾಯಕನ ಸಿರಸ್ಸು ಶಕ್ತಿಯ ಎಡಭುಜದ ಮೇಲಿರಬೇಕು. ಈ ಮೂರ್ತಿಗಳನ್ನು ಸಾಮಾನ್ಯವಾಗಿ ಜನಗಳಿಗೆ ತೋರಿಸುತ್ತಿರಲಿಲ್ಲ. ಗರ್ಭಧಾತು ಮತ್ತು ವಜ್ರಧಾತು ಸಂಪ್ರದಾಯದ ಉಪಾಸಕರು ಮಾತ್ರ ಈ ಮೂರ್ತಿಗಳನ್ನು ನೋಡಬಹುದಾಗಿತ್ತು. ಕಾಂಗೀತೇನ್ ಪ್ರತಿಮೆಯನ್ನು ಒಂದು ವಿಶೇಷವಾದ ಬಟ್ಟೆಯಿಂದ ಮುಚ್ಚಿಡುತ್ತಿದ್ದರು. ಈ

ಮೂರ್ತಿಗೆ ಮತ್ತೊಂದು ರೂಪವಿದ್ದಿತು. ಒಂದು ಸಿರಸ್ಸು, ಒಂದು ಶರೀರ, ನಾಲ್ಕು ಬಾಹುಗಳು ಮತ್ತು ನಾಲ್ಕು ಕಾಲುಗಳಿದ್ದವು. ಸಾಧನೆ ಯಲ್ಲಿ ಉನ್ನತ ಸ್ಥಾನವನ್ನು ಗಳಿಸಿದವರಿಗೆ ಮಾತ್ರ ಆ ಮೂರ್ತಿಯ ದರ್ಶನವಾಗುತ್ತಿತ್ತು. ವೈರೋಚನ ಮತ್ತು ಅವಲೋಕಿತೇಶ್ವರ, ಗಣನಾಥ ಮತ್ತು ಶಕ್ತಿಯರು ಆ ಯುಗಲ ಮೂರ್ತಿಗಳ ಪ್ರತೀಕಗಳಾಗಿರುತ್ತಿದ್ದರು. ಭಾರತೀಯ ತಾಂತ್ರಿಕ ಶಬ್ದದಲ್ಲಿ ಶಿವ ಮತ್ತು ಶಕ್ತಿಯರ ಯೋಗವಾಗಿದೆ ಎಂದು ಹೇಳಬಹುದು. ಇಬ್ಬರೂ ಸೇರಿ ಒಂದಾಗಿದ್ದಾರೆ. ನಾಲ್ಕು ಪಾದ ಗಳ ಅರ್ಥ ಅದರ ಪೂರ್ವಜನ್ಮದ ಪ್ರತೀಕ. ಅದರ ಒಂದು ಶರೀರವು ಯೋಗಾವಸ್ಥೆಯ ದ್ಯೋತಕವಾಗಿದೆ.

ತುರ್ಕಿಸ್ಥಾನದಲ್ಲಿ ಒಂದು ಮೂರ್ತಿ ಸಿಕ್ಕಿದೆ. ಅದಕ್ಕೆ ಒಂದು ಶರೀರ, ನಾಲ್ಕು ಕೈಗಳು ಮತ್ತು ಎರಡು ಕಾಲುಗಳಿವೆ. ಇದರಲ್ಲಿ ಕಾಂಗೀತೇನ್ ಮೂರ್ತಿಯ ಗುಪ್ತಭಾವವು ಇರಬಹುದೆಂದು ಹೇಳ ಬಹುದು. ಕಾಂಗೀತೇನ್ ಅಂದರೆ ದೈವ ಮಿಥುನ, ದೈವದ ಜೋಡಿ ಎಂದಾಗುತ್ತದೆ. ಈ ರೀತಿಯ ಮೂರ್ತಿಗಳು ಟಿಬೆಟ್ಟಿನಲ್ಲಿಯೂ ಸಿಕ್ಕು ತ್ತವೆ. ಅವುಗಳನ್ನು ಯವಯುಮ ಎಂದು ಕರೆಯುತ್ತಾರೆ. ಯವ ಯುಮದಲ್ಲಿ ದೈವ ವಿಶೇಷ ಮತ್ತು ಅವುಗಳ ಶಕ್ತಿಗಳ ಜೋಡಿಮೂರ್ತಿ ಗಳು ಪರಸ್ಪರ ಆಲಂಗಿಸುವ ಭಾವದಲ್ಲಿರುತ್ತವೆ. ಗಣೇಶನ ಯವಯುಮ ಮೂರ್ತಿಯಲ್ಲಿ ಶಕ್ತಿಯು ಗಜಮುಖದವಳಾಗಿರುತ್ತಾಳೆ.

ಈ ಜೋಡಿ ಮೂರ್ತಿಗಳ ಕಲ್ಪನೆಯು ಸ್ವತಂತ್ರವಾಗಿ ಉದಯಿ ಸಿತೋ ಅಥವಾ ಭಾರತದಿಂದ ಅಲ್ಲಿಗೆ ಹೋಯಿತೋ ಅಥವಾ ಟಿಬೆಟ್ಟಿನ ಯವಯುಮ ಮೂರ್ತಿಗಳನ್ನು ನೋಡಿ ಹುಟ್ಟಿದವೋ ಎಂಬುದು ತಿಳಿದುಬಂದಿಲ್ಲ. ಈ ವಿಷಯದಲ್ಲಿ ವಿದ್ವಾಂಸರ ಅಭಿಪ್ರಾಯ ಭಿನ್ನ ವಾಗಿದೆ. ನನ್ನ ಅಭಿಪ್ರಾಯದಲ್ಲಿ ಇದರ ಕಲ್ಪನೆ ಭಾರತದಲ್ಲಿಯೇ ಆಗಿರ ಬೇಕು. ಸಾಮಾನ್ಯವಾಗಿ ದಕ್ಷಿಣಮಾರ್ಗದ ಉಪಾಸನೆಗಳಲ್ಲಿ ಶಕ್ತಿ

ಯನ್ನು ಮೇಲಿನ ರೀತಿಯಲ್ಲಿ ಹೇಳಿರುವುದಿಲ್ಲ. ಶಂಕರನನ್ನು ಅರ್ಧ ನಾರೀಶ್ವರನರೂಪದಲ್ಲಿ ಚಿತ್ರಿಸಿದ್ದಾರೆ. ಈ ವಿಗ್ರಹಗಳಲ್ಲಿ ಶಿವ ಮತ್ತು ಶಕ್ತಿಯರಿಗೆ ಸ್ವತಂತ್ರವಾದ ಅಸ್ತಿತ್ವವಿಲ್ಲ. ಮಲಗಿರುವ ವಿಷ್ಣುವಿನ ಪಾದದ ಸಮೀಪದಲ್ಲಿ ಲಕ್ಷ್ಮಿಯು ಕುಳಿತಿರುತ್ತಾಳೆ. ಸಾಮಾನ್ಯವಾಗಿ ಹರಗೌರೀ, ಲಕ್ಷ್ಮೀನಾರಾಯಣ, ರಾಧಾಕೃಷ್ಣ ಇತ್ಯಾದಿಗಳು ಒಬ್ಬರ ಪಕ್ಕದಲ್ಲಿ ಒಬ್ಬರು ಇರುವಂತೆ ಚಿತ್ರಿಸಿರುತ್ತಾರೆ. ತಂತ್ರಗಳಲ್ಲಿ ದೇವ ಮತ್ತು ಶಕ್ತಿಯು ಗಾಢಶ್ಲೇಷ ಮುದ್ರೆಯಲ್ಲಿರುತ್ತಾರೆ. ಅಂದರೆ ಒಬ್ಬರ ಕೈ ಮತ್ತೊಬ್ಬರ ಭುಜದ ಮೇಲಿರುತ್ತದೆ. ಬೌದ್ಧತಂತ್ರಗಳಲ್ಲಿ ಇದೇ ರೀತಿಯಾದ ಮುದ್ರೆಗಳಿವೆ. ಆದರೆ ಸ್ವಲ್ಪ ಭಿನ್ನತೆಗಳಿವೆ. ಹಿಂದೆ ಈರೀತಿಯಾದ ಉದಾಹರಣೆಗಳನ್ನು ಕೊಡಲಾಗಿದೆ. ಅದು ಮನುಷ್ಯನಿಗೆ ಅಶ್ಲೀಲವಾಗಿ ಕಂಡುಬರುತ್ತದೆ. ಆದರೆ ಶೂನ್ಯ ಮತ್ತು ಕರುಣೆಯ ಜೋಡಿಯಾದ ಮೂರ್ತಿಗಳ ಧ್ಯಾನಗಳು ಹಿಂದೆ ಹೇಳಲ್ಪಟ್ಟಿವೆ. ಅವು ಗಳೂ ಸಹ ಅಶ್ಲೀಲವಾಗಿವೆ ಎಂದು ಹೇಳಬಹುದು. ಶ್ರೀ ಚಕ್ರಸಂಭಾರ ತಂತ್ರದ ಪ್ರಕಾರ ಅವುಗಳು ಪ್ರಜ್ಞಾ ಮತ್ತು ಉಪಾಯದ ಜೋಡಿಯೇ ಇರಬೇಕು. ಪ್ರಜ್ಞೆ ಇಲ್ಲದ ಉಪಾಯದಿಂದ ಸಂಸಾರ ರೂಪವಾದ ಬಂಧನ ವಾಗುತ್ತದೆ. ಉಪಾಯವಿಲ್ಲದ ಪ್ರಜ್ಞೆಯಿಂದ ನಿರ್ವಾಣ ರೂಪಬಂಧನ ವಾಗುತ್ತದೆ. ಎರಡು ಅಪೃಥಕ್ತ್ವ ಎಂದು ತಿಳಿಸಲಿಕ್ಕಾಗಿ ಪ್ರತ್ಯಂಗಸ್ಪರ್ಶ ವನ್ನು ಮಾಡಿಸಲಾಗಿದೆ. ನನ್ನ ಅಭಿಪ್ರಾಯದಲ್ಲಿ ಈ ಸಂಪ್ರದಾಯವನ್ನು ಕಾಂಗೀತೇನ್ ಸಂಪ್ರದಾಯವು ಪೂರ್ಣಗೊಳಿಸಿದೆ. ಕಾಂಬೋದಾಯಿಶಿ ಅಥವಾ ಅವನ ಗುರುವು ಪ್ರಜ್ಞಾ ಮತ್ತು ಉಪಾಯವನ್ನು ಅವಲೋಕಿತೇ ಶ್ವರ ಮತ್ತು ವೈರೋಚನನೆಂದು ಮಾಡಿರಬಹುದು, ಮತ್ತು ಅವುಗಳಿಗ ನುಸಾರವಾಗಿ ಸಿದ್ಧಾಂತಗಳನ್ನು ರಚಿಸಿರಬೇಕು ಎಂದು ಹೇಳಬಹುದು. ಒಂದು ಪಕ್ಷ ಅದೇರೀತಿಯಾಗಿದ್ದರೆ ಅವನು ರತಿಮುದ್ರೆಯಲ್ಲಿಯೇ ತೋರಿಸದೆ ಸಿರಸ್ಸಿನಿಂದ ಕಾಲಿನವರೆವಿಗೆ ಬಟ್ಟೆಯಿಂದ ಮುಚ್ಚಿ ಅಶ್ಲೀಲತೆ ಎಂಬ ದೋಷದಿಂದ ಮೂರ್ತಿಯನ್ನು ಮುಕ್ತಗೊಳಿಸಿರಬೇಕು.

ಪರಸ್ಪರ ಎದುರಾಗಿ ನಿಂತಿರುವ ಪುರುಷ ಮತ್ತು ಶಕ್ತಿಯರ ಜೋಡಿ ಮೂರ್ತಿಗಳು ಭಾರತೀಯರ ಕಲ್ಪನೆಗಳೆಂದು ತಿಳಿಯಲು ಆಧಾರಗಳಿವೆ. ಹಿಂದೆ ಹೇಳಿರುವ ಕುಶಾನವಂಶದ ಚಕ್ರವರ್ತಿ ಹುವಿಷ್ಕನ ಒಂದು ನಾಣ್ಯದಲ್ಲಿ ಆ ಯುಗಲಮೂರ್ತಿಯನ್ನು ಕಾಣಬಹುದು. ಅವನ ಕಾಲ ವಿನ್ ಸೆಂಟ್‌ಸ್ಮಿತ್‌ನ ಅಭಿಪ್ರಾಯದಂತೆ ಸಂ|| ೯೩ ರಿಂದ ೧೨೩ ಎಂದು ತಿಳಿದು ಬರುತ್ತದೆ. ಆ ನಾಣ್ಯವು ಈಗಲೂ ಲಾಹೋರಿನ ವಸ್ತುಸಂಗ್ರಹಾಲಯದಲ್ಲಿದೆ. ಅದರಲ್ಲಿಯ ಪುರುಷನನ್ನು ಯವನ ಲಿಪಿಯಲ್ಲಿ ಓಯಸೊ (ಭವೇಶ) ಎಂದು ಮತ್ತು ಸ್ತ್ರೀಯನ್ನು ಸಿನಾ (ಉಮಾ) ಎಂದು ಬರೆದಿದೆ. ಇದರಿಂದ ಇಂದಿಗೆ ಎರಡುಸಾವಿರ ವರ್ಷಗಳಿಗೆ ಮೊದಲೇ ಶಿವ ಮತ್ತು ಇತರ ದೇವತೆಗಳು ಹಾಗು ಶಕ್ತಿಗಳನ್ನು ಪರಸ್ಪರ ಎದುರುಬದರಾಗಿ ಚಿತ್ರಿಸುವ ರೂಢಿ ಇತ್ತೆಂದು ತಿಳಿದುಬರುತ್ತದೆ.

ಅವಲೋಕಿತೇಶ್ವರ ಬೋಧಿಸತ್ವನನ್ನು ಸ್ತ್ರೀರೂಪದಲ್ಲಿ ತೋರಿಸಿರುವುದು ಅರ್ಥಪೂರ್ಣವೇ ಆಗಿದೆ. ಆದರೆ ಜಗದಾತ್ಮವೈರೋಚನನಿಗೆ ವಿನಾಯಕನ ರೂಪವನ್ನು ಏಕೆ ಕೊಟ್ಟರೆಂಬುದು ರಹಸ್ಯವಾಗಿದೆ. ವೈರೋಚನನೆಂದರೆ ಒಬ್ಬ ಬೋಧಿಸತ್ವನ ಹೆಸರು. ಗರ್ಭಧಾತು ವಜ್ರಧಾತು ಮಂಡಲಗಳಲ್ಲಿ ವಿನಾಯಕನಿಗೆ ಚಿತ್ರಗಳ ಹೊರಗಡೆ ಸಣ್ಣಸಣ್ಣ ದೇವತೆಗಳ ಮಧ್ಯದಲ್ಲಿ ಸ್ಥಾನವನ್ನು ಕೊಡಲಾಗಿದೆ. ಆದರೂ ಸಹ ಅದೇ ಸಂಪ್ರದಾಯದ ಅಂತರಂಗ ಪೂಜೆಯಲ್ಲಿ ಪ್ರಧಾನ ಸ್ಥಾನವನ್ನು ಏಕೆ ಕೊಟ್ಟಿದ್ದಾರೆ? ಕಾಂಗಿತೇನಿನ ಪುರುಷಮೂರ್ತಿ ವಿನಾಯಕನಲ್ಲದಿದ್ದರೆ ಅವನನ್ನು ಗಜಮುಖದವನನ್ನಾಗಿ ಮಾಡಿದ್ದೇಕೆ? ಇವೆಲ್ಲವೂ ಇಂದಿಗೂ ರಹಸ್ಯವಾಗಿಯೇ ಉಳಿದಿವೆ. ಆ ರಹಸ್ಯವನ್ನು ಭೇದಿಸಲು ಯಾರಿಂದಲೂ ಸಾಧ್ಯವಾಗಿಲ್ಲ. ಶಕ್ತಿಯೊಡನಿರುವ ವಿನಾಯಕನನ್ನು ಮತ್ತು ಪೃಥಕ್ಕಾದ ವಿನಾಯಕನನ್ನೂ ಸಹ ಪೂಜಿಸುತ್ತಿದ್ದರು. ವಜ್ರಧಾತುವಿನಲ್ಲಿ ಹೇಳಿರುವ ಐದನೇ ವಿನಾಯಕನು ಬಹಳ ಪ್ರಸಿದ್ಧಿಯಾಗಿದ್ದನು. ಅವನ ಮೂರ್ತಿ

ಗಳು ಎಲ್ಲಾ ಕಡೆಯಲ್ಲಿಯೂ ಸಿಕ್ಕುತ್ತವೆ. ಅವನಿಗೆ ಪ್ರತ್ಯೇಕ ಮಂದಿರಗಳನ್ನು ಕಟ್ಟಿಸಿರುವರು. ಜಪಾನಿನಲ್ಲಿ ಇಂದಿಗೂ ಕೆಲವು ಬೌದ್ಧ ಮಂದಿರಗಳಲ್ಲಿ ಆ ವಿನಾಯಕನನ್ನು ಪೂಜಿಸುತ್ತಾರೆ. ಆ ಗಣಪತಿಗೆ ಮೂರು ಸಿರಸ್ಸುಗಳು ಮತ್ತು ಆರು ಬಾಹುಗಳಿವೆ.

ಗಣೇಶನ ಕೈಯಲ್ಲಿರುವ ಮೂಲಿಯ (ಮೂಲಂಗಿ) ವಿಷಯವಾಗಿ ಭಾರತದಲ್ಲಿಯ ಪುರಾಣಗಳಲ್ಲಿ ಉಲ್ಲೇಖವಿಲ್ಲ. ಜಪಾನಿನಲ್ಲಿ ಇದರ ವಿಷಯವಾಗಿ ಒಂದು ಕಥೆ ಇದೆ :—

ಪ್ರಾಚೀನ ಕಾಲದಲ್ಲಿ ಮರುರುತ್ಸು ಎಂಬ ರಾಜನಿದ್ದನು. ಅವನು ತನ್ನ ಪ್ರತಿದಿನದ ಊಟಕ್ಕಾಗಿ ಮಾಂಸ ಮತ್ತು ಮೂಲಂಗಿಯನ್ನು ಉಪಯೋಗಿಸುತ್ತಿದ್ದನು. ಅವನ ರಾಜ್ಯದಲ್ಲಿಯ ಪ್ರಾಣಿಗಳೆಲ್ಲಾ ಅವನ ಊಟದ ಮಾಂಸಕ್ಕಾಗಿ ನಾಶವಾದವು. ಅನಂತರ ರಾಜನ ಆಹಾರಕ್ಕಾಗಿ ಸತ್ತಮನುಷ್ಯನ ಮಾಂಸವನ್ನು ಉಪಯೋಗಿಸುತ್ತಿದ್ದರು. ಇದರಿಂದಲೂ ಅವನಿಗೆ ಆಹಾರವನ್ನು ಪೂರೈಸಲಾಗಲಿಲ್ಲ. ಅವನ ಮಂತ್ರಿಗಳು ಸಮಾಲೋಚಿಸಿ ಜೀವಂತ ಮನುಷ್ಯನನ್ನೇ ಆಹಾರಕ್ಕಾಗಿ ಕೊಲ್ಲುತ್ತಿದ್ದರು. ಇದರಿಂದ ಪ್ರಜೆಗಳು ಹೆದರಿದರು. ಪ್ರಜೆಗಳೆಲ್ಲರೂ ರಾಜನ ಮೇಲೆ ಒಂದೇಸಾರಿ ದಂಗೆ ಎದ್ದರು. ರಾಜ ಮರುರುತ್ಸುವು ತಲೆತಪ್ಪಿಸಿಕೊಂಡು ಓಡಿದನು. ಯಾರಿಗೂ ಸಿಕ್ಕಲಿಲ್ಲ. ಅವನು ವಸ್ತುತಃ ರಾಕ್ಷಸನಾಗಿದ್ದನು. ಅವನು ನರಮಾಂಸವನ್ನು ತಿನ್ನಲು ಮನುಷ್ಯರೂಪದಿಂದ ಬಂದಿದ್ದನು. ಅವನು ವಿನಾಯಕನ ರೂಪವನ್ನು ಧರಿಸಿ ತನ್ನ ಲೋಕಕ್ಕೆ ಹಾರಿ ಹೋದನು. ಈ ಕಾರಣದಿಂದ ವಿನಾಯಕನಿಗೆ ಮೂಲಂಗಿಯು ಇಷ್ಟವಾಯಿತೆಂದು ಹೇಳುತ್ತಾರೆ. ಈ ನರಮಾಂಸವನ್ನು ತಿನ್ನುವ ವಿನಾಯಕನು ಮಾನವನ ಎಲ್ಲಾ ವಿಘ್ನಗಳನ್ನೂ ಹೋಗಲಾಡಿಸುವವನಲ್ಲದೆ ಪರಲೋಕದ ಮಾರ್ಗದರ್ಶಕನೂ, ವಿಶ್ವಾತ್ಮನ ಸ್ವರೂಪನೂ, ಪರಿಪೂರ್ಣನೂ ಮತ್ತು ದ್ವಂದ್ವರಹಿತ ಸಮಾಧಿಯ ಪ್ರತೀಕನೂ ಆದನು. ಕಿಮಾಶ್ಚರ್ಯಮತಃ ಪರಮ್ ।

## ವಿಸರ್ಜನೆ

ಭಾರತೀಯ ಅನಾರ್ಯರ ಹಳ್ಳಿಗಳಿಂದ ಹೊರಟು ತುರ್ಕಿಸ್ಥಾನ ಟಿಬೆಟ್, ಮಲಯಾದ್ವೀಪ ಮತ್ತು ಚೀನಾ ದೇಶಗಳಲ್ಲಿ ಸಂಚರಿಸಿ ಜಪಾನಿಗೆ ಬಂದು ಸೇರಿದೆವು. ವಿನಾಯಕನು ಕೆಲವುಕಡೆ ಪುಣ್ಯಕಾರ್ಯಗಳಲ್ಲಿ ವಿಘ್ನವನ್ನುಂಟುಮಾಡುವುದನ್ನು ನೋಡಿದ್ದೇವೆ. ಅವನ ಕೈಯಲ್ಲಿ ಮುಕ್ತಿಯ ಬೀಗದ ಕೈ ಇರುವುದನ್ನು ನೋಡುತ್ತಿದ್ದೇವೆ. ದೇಶವಿದೇಶ ಉಡುಪಿನಲ್ಲಿದ್ದರೂ ಅವನು ನಮ್ಮವನೇ. ಈಗ ಅವನನ್ನು ಬಿಳ್ಕೊಡುತ್ತಿದ್ದೇವೆ. ಈ ಸಮಯದಲ್ಲಿ ವಿಸರ್ಜನ ಮಂತ್ರ 'ವಿಘ್ನರಾಜ ಕ್ಷಮಸ್ವ' ದ ಜೊತೆಯಲ್ಲಿ ಶ್ರೀಕಾಶೀಕೇದಾರ ಮಹಾತ್ಮೆಯಲ್ಲಿ ಹೇಳಿರುವ ಶ್ಲೋಕವನ್ನು ಹೇಳುತ್ತೇವೆ:—

ವಿಘ್ನಧ್ವಾಂತ ನಿವಾರಣೈಕತರಣಿ—
ರ್ವಿಘ್ನಾಟವೀ ಹವ್ಯವಾಟ್
ವಿಘ್ನವ್ಯಾಲಕುಲೋಪಮರ್ದಗರುಡೋ
ವಿಘ್ನೇಭಪಂಚಾನನಃ ।
ವಿಘ್ನೋತ್ತುಂಗಗಿರೀಶಮರ್ದನಪವಿ
ರ್ವಿಘ್ನಾಬ್ಧಿಕುಂಭೋದ್ಭವೋ,
ವಿಘ್ನಾಭ್ರೌಘಘನಪ್ರಚಂಡಪವನೋ
ವಿಘ್ನೇಶ್ವರಃ ಪಾತು ನಃ ॥

ಯಾವ ವಿಘ್ನೇಶ್ವರನು ವಿಘ್ನವೆಂಬ ಅಂಧಕಾರವನ್ನು ಹೋಗಲಾಡಿಸುವುದರಲ್ಲಿ ಸೂರ್ಯನಂತಿದ್ದಾನೆಯೋ, ವಿಘ್ನವನ್ನು ಸುಡುವ ಅಗ್ನಿಯಂತಿರುವನೋ, ವಿಘ್ನರೂಪ ಸರ್ಪಕುಲವನ್ನು ನಾಶಮಾಡುವುದರಲ್ಲಿ ಗರುಡನಂತಿರುವನೋ, ವಿಘ್ನರೂಪ ಆನೆಗೆ ಸಿಂಹಸ್ವರೂಪನಾಗಿರುವನೋ, ವಿಘ್ನವೆಂಬ ಪರ್ವತವನ್ನು ಭೇದಿಸಲು ವಜ್ರಾಯುಧದಂತಿರುವನೋ, ವಿಘ್ನರೂಪ ಸಮುದ್ರವನ್ನು ಒಣಗಿಸಲು ಅಗಸ್ತ್ಯನಂತಿರುವನೋ ಮತ್ತು ವಿಘ್ನಗಳೆಂಬ ಭಯಂಕರ ಮೋಡಗಳನ್ನು ನಾಶಮಾಡಲು ವಾಯುವಿನಂತಿರುವನೋ ಆ ವಿಘ್ನೇಶ್ವರನು ನಮ್ಮನ್ನು ರಕ್ಷಿಸಲಿ.

ಇತಿ ಶಿವಂ

# ಪರಿಶಿಷ್ಟ (ಕ)

**ಗಣೇಶನ ಕೆಲವು ಹೆಸರುಗಳು :—**

ಗಣೇಶನ ಕೆಲವು ಹೆಸರುಗಳನ್ನು ಯಥಾಸ್ಥಾನದಲ್ಲಿ ಕೊಡಲಾಗಿದೆ. ೫೦ ಹೆಸರುಗಳನ್ನು ಒಂದೇಕಡೆ ೭ ನೇ ಅಧ್ಯಾಯದಲ್ಲಿ ಹೇಳಿದೆ. ಈ ಕೆಳಗೆ ಕೊಟ್ಟಿರುವ ೩೫ ಹೆಸರುಗಳನ್ನು ಗಣೇಶಪುರಾಣದ ಗಣೇಶ ಕವಚದಿಂದ ತೆಗೆದುಕೊಳ್ಳಲಾಗಿದೆ:—

ವಿನಾಯಕ, ಮಹೋತ್ಕಟ, ಭಾಲಚಂದ್ರ, ಗಜಾಸ್ಯ, ಗಣಕ್ರೀಡಾ, ಗಿರಿಜಾಸುತ, ದುರ್ಮುಖ, ಪಾಶಪಾಣಿ, ಗಣೇಶ, ಗಣಂಜಯ ಗಜಸ್ಕಂದ, ವಿಘ್ನವಿನಾಶನ, ಗಣನಾಥ, ಹೇರಂಬ, ಧರಾಧರ, ವಿಘ್ನಹರ, ವಕ್ರತುಂಡ, ಮಂಗಲಮೂರ್ತಿ, ಏಕದಂತ, ಕ್ಷಿಪ್ರಪ್ರಸಾದನ ಮಯೂರೇಶ, ಧೂಮಕೇತು, ಆಮೋದ, ಪ್ರಮೋದ, ಬುದ್ಧೀಶ ಸಿದ್ಧಿದಾಯಕ, ಉಮಾಪುತ್ರ, ಗಣೇಶ್ವರ, ವಿಘ್ನಹರ್ತಾ, ಗಜಕರ್ಣ ನಿಧಿಪ, ಈಶನಂದನ, ವಿಘ್ನಕೃತ್, ಕಪಿಲ ಮತ್ತು ವಿಕಟ.

ನಾರದ ಪುರಾಣದ ಸಂಕಷ್ಟನಾಶನದ ಸ್ತೋತ್ರದಲ್ಲಿ ೧೨ ಹೆಸರುಗಳು ಹೇಳಲ್ಪಟ್ಟಿವೆ. ಅವುಗಳನ್ನು ಜಪಿಸುವುದರಿಂದ ಅಕ್ಷಯ ಸಿದ್ಧಿಯಾಗುವುದೆಂದು ಹೇಳಿದೆ. ಆ ೧೨ ಹೆಸರುಗಳು ಈ ರೀತಿಯಾಗಿವೆ:—

ಪ್ರಥಮಂ ವಕ್ರತುಂಡಂ ಚ ಏಕದಂತಂ ದ್ವಿತೀಯಕಮ್ ।
ತೃತೀಯಂ ಕೃಷ್ಣಪಿಂಗಾಕ್ಷಂ ಗಜವಕ್ತ್ರಂ ಚತುರ್ಥಕಮ್ ॥
ಲಂಬೋದರಂ ಪಂಚಮಂ ಚ ಷಷ್ಠಂ ವಿಕಟಮೇವ ಚ ।
ಸಪ್ತಮಂ ವಿಘ್ನರಾಜಂ ಚ ಧೂಮ್ರವರ್ಣಂ ತಥಾಷ್ಟಕಮ್ ॥
ನವಮಂ ಭಾಲಚಂದ್ರಂ ಚ ದಶಮಂ ತು ವಿನಾಯಕಮ್ ।
ಏಕಾದಶಂ ಗಣಪತಿಂ ದ್ವಾದಶಂ ತು ಗಜಾನನಮ್ ॥
ದ್ವಾದಶೈತಾನಿ ನಾಮಾನಿ ತ್ರಿಸಂಧ್ಯಂ ಯಃ ಪಠೇನ್ನರಃ ।
ನ ಚ ವಿಘ್ನಭಯಂ ತಸ್ಯ ಸರ್ವಸಿದ್ಧಿಕರಂ ಪರಮ್ ॥

ಈ ೧೨ ಹೆಸರುಗಳನ್ನು ಯಾವನು ಜಪಿಸುತ್ತಾನೋ ಅವನಿಗೆ ವಿಘ್ನಗಳ ಭಯವಿಲ್ಲ. ಈ ಜಪವು ಶ್ರೇಷ್ಠ ಮತ್ತು ಸರ್ವಸಿದ್ಧಿಕರವಾ

ದುದು. ಕಾಶಿಯ ಜಂಗಮವಾಡಿ ಮಠದ ಶ್ರೀ ಶಿವಲಿಂಗಶಿವಾಚಾರ್ಯರು ಶ್ರೀ ಗಣೇಶಾಷ್ಟೋತ್ತರಶತನಾಮಾವಲಿಃ ಎಂಬ ಪುಸ್ತಕದಲ್ಲಿ ೧೦೮ ಹೆಸರುಗಳನ್ನು ಕೊಟ್ಟಿದ್ದಾರೆ.

---

## ಪರಿಶಿಷ್ಟ (ಖ)

ಸ್ಕಂದಪುರಾಣಾಂತರ್ಗತವಾದ ಕಾಶೀಖಂಡದಲ್ಲಿ ಹೇಳಿರುವ ಹೆಸರುಗಳು. [ಈ ವಿನಾಯಕರ ಹೆಸರು ಮತ್ತು ಕಾಶಿಯಲ್ಲಿಯ ಅವರ ವಾಸಸ್ಥಾನಗಳನ್ನು ಸ್ವಯಂ ಶಂಕರನೇ ಹೇಳಿದ್ದಾನೆ].

ಢುಂಢಿ, ಇವನು ಎಲ್ಲಾ ವಿನಾಯಕರ ಮುಖ್ಯನು.

ಕಾಶಿಯ ಮೊದಲನೇ ಆವರಣದ ರಕ್ಷಕರು—೮

ಅರ್ಕ, ದುರ್ಗ, ಭೀಮಚಂಡ, ದೆಹಲೀ, ಉದ್ದಂಡ, ಪಾಶಪಾಣಿ, ಸರ್ವ ಮತ್ತು ಸಿದ್ಧ.

ಕಾಶಿಯ ಎರಡನೇ ಆವರಣದ ರಕ್ಷಕರು—೮

ಲಂಬೋದರ, ಕೂಟದಂತ, ಶಾಲಕಟಂಕಟ, ಕೂಷ್ಮಾಂಡ ಮುಂಡ, ವಿಕಟ, ರಾಜಪುತ್ರ ಮತ್ತು ಪ್ರಣವ.

ಕಾಶಿಯ ಮೂರನೇ ಆವರಣದ ರಕ್ಷಕರು—೮

ವಕ್ರತುಂಡ, ಏಕದಂತ, ತ್ರಿಮುಖ, ಪಂಚಾಸ್ಯ, ಹೇರಂಬ, ವಿಕಟ, ವರದ ಮತ್ತು ಮೋದಕಪ್ರಿಯ.

ಕಾಶಿಯ ನಾಲ್ಕನೆಯ ಆವರಣದ ರಕ್ಷಕರು—೮

ಅಭಯದ, ಸಿಂಹತುಂಡ, ಕೂಣಿತಾಕ್ಷ, ಕ್ಷಿಪ್ರಪ್ರಸಾದನ, ಚಿಂತಾಮಣಿ, ದಂತಹಸ್ತ, ಪಿಚಿಂಡಿಲ ಮತ್ತು ಉದ್ದಂಡಮುಂಡ.

ಕಾಶಿಯ ಐದನೆಯ ಆವರಣದ ರಕ್ಷಕರು—೮

ಸ್ಥೂಲದಂತ, ಕಲಿಪ್ರಿಯ, ಚತುರ್ದಂತ, ದ್ವಿತುಂಡ, ಜ್ಯೇಷ್ಠರಾಜ, ಕಾಲ, ಮತ್ತು ನಾಗೇಶ.

ಕಾಶಿಯ ಆರನೆಯ ಆವರಣ ರಕ್ಷಕರು—೮

ಮಣಿಕರ್ಣ, ಆಶಾ, ಸೃಷ್ಟಿ, ಪಕ್ಷ, ಗಜಕರ್ಣ, ಚಿತ್ರಘಂಟ, ಸ್ಥೂಲಜಂಘ ಮತ್ತು ಮಂಗಲ.

ಕಾಶಿಯ ಏಳನೇ ಆವರಣದ ರಕ್ಷಕರು—೮

ಮಿತ್ರ, ಮೋದ, ಜ್ಞಾನ, ದ್ವಾರ, ಉಳಿದ ನಾಲ್ಕುಜನ ವಿನಾಯಕರಸ್ಪಷ್ಟವಾದ ಉಲ್ಲೇಖವಿರುವುದಿಲ್ಲ.

---

## ಪರಿಶಿಷ್ಟ (ಗ)

ಗಣೇಶನ ಮಂದಿರ:—

ಗಣೇಶನ ಮಂದಿರದಲ್ಲಿ ಪ್ರಧಾನಮೂರ್ತಿಯ ಎಡಗಡೆ ಗಜಕರ್ಣನ ಮೂರ್ತಿ ಇರಬೇಕು. ಬಲಗಡೆ ಸಿದ್ಧಿ, ಉತ್ತರದಲ್ಲಿ ಗೌರೀ ಪೂರ್ವದಲ್ಲಿ ಬುದ್ಧಿ, ಆಗ್ನೇಯ ದಿಕ್ಕಿನಲ್ಲಿ ಬಾಲಚಂದ್ರ, ದಕ್ಷಿಣದಲ್ಲಿ ಸರಸ್ವತೀ, ಪಶ್ಚಿಮದಲ್ಲಿ ಕುಬೇರ ಮತ್ತು ಹಿಂದೆ ಧೂಮಕನ ಮೂರ್ತಿಗಳಿರಬೇಕು. ಮಂದಿರದ ನಾಲ್ಕುದಿಕ್ಕುಗಳಲ್ಲಿಯೂ ನಾಲ್ಕು ದ್ವಾರಗಳಿರಬೇಕು. ಪ್ರತಿಯೊಂದು ದ್ವಾರದಲ್ಲಿಯೂ ಇಬ್ಬರು ದ್ವಾರಪಾಲಕರಿರಬೇಕು. ಪೂರ್ವದ್ವಾರದ ದ್ವಾರಪಾಲಕರ ಹೆಸರು ಅವಿಘ್ನ ಮತ್ತು ವಿಘ್ನರಾಜ, ದಕ್ಷಿಣದ್ವಾರದಲ್ಲಿ ಸುವಕ್ತ್ರ ಮತ್ತು ಬಲವಾನ್, ಪಶ್ಚಿಮದ್ವಾರದಲ್ಲಿ ಗಜಕರ್ಣ ಮತ್ತು ಗೋಕರ್ಣ, ಉತ್ತರದ್ವಾರದಲ್ಲಿ ಸುಸೌಮ್ಯ ಮತ್ತು ಶುಭದಾಯಕ. ದ್ವಾರಪಾಲಕರು ವಾಮನಕೃತಿಯವರು ಮತ್ತು ಘೋರರೂಪಿಗಳಾಗಿರಬೇಕು. ಎಲ್ಲರಿಗೂ ನಾಲ್ಕುನಾಲ್ಕು ಕೈಗಳಿರಬೇಕು. ಒಂದು ಕೈಯಲ್ಲಿ ದಂಡ,ಮತ್ತೊಂದು ಕೈ ತರ್ಜನೀ ಮುದ್ರೆಯಲ್ಲಿರಬೇಕು. ಅವಿಘ್ನ ಮತ್ತು ವಿಘ್ನರಾಜನ ಉಳಿದ ಕೈಗಳಲ್ಲಿ ಪರಶು ಮತ್ತು ಪದ್ಮವಿರಬೇಕು. ಸುವಕ್ತ್ರ ಮತ್ತು ಬಲವಾನ್ ಇವರ ಉಳಿದ ಕೈಗಳಲ್ಲಿ ಖಂಗ ಮತ್ತು ಖೇಟಕ, ಗಜಕರ್ಣ ಮತ್ತು ಗೋಕರ್ಣರ ಉಳಿದ ಕೈಗಳಲ್ಲಿ ಧನುಸ್ಸು ಮತ್ತು ಬಾಣ, ಸೌಮ್ಯ ಮತ್ತು ಶುಭದಾಯಕರ ಉಳಿದ ಕೈಗಳಲ್ಲಿ ಪದ್ಮ ಮತ್ತು ಅಂಕುಶವಿರಬೇಕು. ಗಣೇಶನ ಸೊಂಡಿಲು ಸಾಮಾನ್ಯವಾಗಿ ಎಡಗಡೆ ತಿರುಗಿಕೊಂಡಿರುತ್ತದೆ. ಪುರಾಣಗಳಲ್ಲಿ ಈ ಪ್ರತಿಮೆಗಳನ್ನು ಮಾಡುವ ಮತ್ತು ಪರಿಮಾಣಗಳ ವಿವರವಾದ ವಿವರಣೆಗಳು ಉಕ್ತವಾಗಿವೆ.

